## 350

ಅದೇ ಬೆಟ್ಟದ ಮೇಲೆ ಚಿಕ್ಕ ದೊಣೆಗೆ ದಕ್ಷಿಣಕ್ಕೆ ಸೋಪಾನದ ಬಲಭಾಗದಲ್ಲಿ ಹಾಸು ಬಂಡೆಯ ಮೇಲೆ.

1 ಸಂತೆ ಕಲಹಳಿಯ ಕೋಡಿ ಸೆಟಿಯ ಮುಳುವಾಗಿಲ
2 ಕೊರೆವಡಿಯ ಕುಬಾರ ಬೈತಿಸೆಟಿ ಕೊಲಲಗಿಟಿ ಶನು
3 ಇನುಕುಲದೇವನ ಲಅಂ ಇಶರದ ಅವರ ಬಹುವತು
4 ಮುಗುದರು ಆರು ತಪಿದರು ದೇವಲೋಕ ಮರ್ತ್ಯಲೋಕಕ್ಕೆ ಹೊ
5 ರಗು ಅರಮನೆ ಅಪರಜ ೧೨೦ ಕೂಲಿ ಆಪರವ ೧೨೦
6 ವ ೧೨೦

## 351

ಅದೇ ಶ್ರೀಪತೀಶ್ವರ ದೇವಾಲಯದ ಪಾತಾಳಾಂಕಣದಲ್ಲಿ ಪಶ್ಚಿಮಾಭಿಮುಖ ಗೋಡೆಯ ಮೇಲೆ ತಮಿಳು ಶಾಸನದ ಕೆಳಗೆ.

ಕೆಂಪ ತಿಮಯನ ಮಠ.

## 352

ಅದೇ ಶೀತಿಬೆಟ್ಟಕ್ಕೆ ಪೂರ್ವ ಅರ್ಚಕ ಮಲ್ಲಪ್ಪನ ಗದ್ದೆಯ ಪೂರ್ವ ದಿಕ್ಕಿನ ಬದುವಿನಲ್ಲಿ.

ಗ್ರಂಥ ಮತ್ತು ಅರವಕ್ಷರ

---

# MULBAGAL TALUK

## ಮುಳಬಾಗಿಲು ತಾಲ್ಲೂಕು

### Revised Inscriptions.

### ತಿದ್ದುಪಾಡಾದ ಶಾಸನಗಳು

### 5

ಮುಳಬಾಗಲಲ್ಲಿ ವಿಠಲನಾರಾಯಣ ದೇವಾಲಯದ ವೊಳಗೆ ತಳಹದಿ ಕಲ್ಲಿನಲ್ಲಿ.

ಪ್ರಮಾಣ 7′6″×1′3″

1 ವೆಯ ಸಂವತ್ಸರದ ಚಯಿತ್ರ ಸು ೧೨ ಲು ಶ್ರೀಮತು ಹರಿಯಪಗಳೂ ಮಾಡಿದ ನಿರ್ನಯ ನರಸಿಂಗರಾ . . . ಯರಿಗೆ ಧಂಮ್ಮ್ರವ . . . ದ . . . ನಿರೂಪ . . . . . . . ರಾಯಣಯ್ಯ . . . . . . . . .

2 ನಿಯಮ ವಿಭೂತಿಗಾಣಿಕೆ . . . . . ಬೆಡುಗೊಳು ವರ್ತನೆ ತಳವಾಟಿ ರವರಿ ಮುಂತಾಗಿ ಯೆಲಾಲು ಸರ್ವ ಮಾನ್ಯವಾಗಿ ಬಿಟ್ಟು . . . . ಶ್ರಯ ಗ್ರಾಮುಗಳನು ಕೊಟ್ಟೆಉ ಆ ಅಗ್ರಹಾರಗಳ ತಳವಾರ ರವರಿ ಬೆಡುಕೊಳು . . . . .

3 ಧರ್ಮ ಶಾಸನಗಳನೂ ಕೊಟೆಉ . . . ಶ್ರಯ ಗ್ರಾಮುಗಳಿಗೆ ನಿಯಮದ ಗ್ರಾ . . . ಧರ್ಮವೂ ಆಚಂದ್ರಾರ್ಕ ಸ್ಥಾಯಿಯಾಗಿ ನಡೆವ ಹಾಗೆ ಬಿಟೆಉ ಯಿದಕ್ಕೆ ಆರೊಬ್ಬರು . . . . . . . . ತಪ್ಪಿ ಆರಸುಗಳು ಪ್ರಧಾನರು ಆ ಅಶೇಷ . . . . . ಟಿ ಸೇನ

4 ಬೋವರು ಮುಂತಾಗಿ ಆರೊಬ್ಬರೂ ಅನ್ಯಾಯದಲಿ ಆಂರು ಹಣವನೂ ಭತ್ತವ ಕೊಂಡರೆ ಯೀ ದ್ರವ್ಯ ಊಣವಾ . . ವಾರಣಾಸಿಯಲಿ ಗೋವನೂ ಬ್ರಾಹ್ಮಣರನೂ ಕೊಂದವರು ಮಾತೃಗಳನೂ ಗುರುದಾರ ಗಮನವನು ಮಾಡಿದವರು ನರಸಿಂಗರಾಜ . . . ಊ

5 ಆಚಂದ್ರಾರ್ಕ ಸ್ಥಾಯಿಯಾಗಿ ನಡೆಯ ಉಳದು ಯೀ ಅಗ್ರಹಾರಗಳ ಸ್ಥಾನಗಳಿಗೆ ಹರಿಯಪಗಳಿಗೆ ಕೊಟ್ಟ ಧರ್ಮ ಶಾಸನ . . ೦ ಜ ೦ ನರಸನ ಬರಹ

### 13

ಮುಳಬಾಗಿಲಿಗೆ ಆಗ್ನೇಯದಲ್ಲಿ ಶಂಕರತೀರ್ಥದ ಬಳಿ ವಿಘ್ನೇಶ್ವರ ದೇವಾಲಯದ ಹತ್ತಿರ ಇರುವ ಬಂಡೆಯ ಮೇಲೆ.
(ಬಿಟ್ಟು ಹೋಗಿದ್ದ ಭಾಗ)

ಗ್ರಂಥ ಮತ್ತು ಅರವಕ್ಷರ

### 19

ಮುಳಬಾಗಿಲ ಹೋಬಳಿ ಸೋಮೇಶ್ವರಪಾಳ್ಯದ ದೇವಾಲಯದ ದಕ್ಷಿಣ ಕಡೆ ಗೋಡೆಯಲ್ಲಿ.

ಪ್ರಮಾಣ 8′ 6″×2′

1 ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೪೪೦ ನೆಯ ಬಹುಧಾಂನ್ಯ ಸಂವತ್ಸರದ ವೈಶಾಖ ಶು ೧೫ ಲು ಶ್ರೀಮತ್ ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀ ವೀರ ಕೃಷ್ಣರಾಯ ಮಹಾರಾಯರು ಪೃಥ್ವೀ ರಾಜ್ಯಂ ಗೈಯುತ್ತಂ ಇರಲೂ

2 ಮುಳುವಾಯ ರಾಜ್ಯಕ್ಕೆ ಸಲುವ ಯೆಳವಂಜಿ ನಾಡೊಳಗಣ ಮಂದರಗೋಂಟೆಯೆಂಬ ಗ್ರಾಮವನೂ ಕಟೆಯ ಬೆದೆಯ ನಾಯಕರು ಮುಳುವಾಯ ಸೋಮೇಶ್ವರನ ಅಮೃತಪಡಿಗೆ ಪಾಲಿಸಬೇಕೆಂದು ಕೃಷ್ಣರಾಯ ಮಹಾರಾಯರಿಗೆ ಬಿನ್ನಹಂ ಮಾಡಲಾಗಿ ಆ ಬಿಂನಹಂನೂ ಪಾಲಿಸಿ ಆ ಮಂದಿರ ಗೋಂಟೆಯ

3 ಗ್ರಾಮವನೂ ಸೋಮೇದೇವರಿಗೆ ಕೊಟೆವಾಗಿ ಕರಣೀಕ ನಾಗರಶೆಟ್ಟಿ . . . ಗೆ ನಿರೂಪವನೂ ಕೊಡಲಾಗಿ ಕೃಷ್ಣರಾಯ ಮಹಾರಾಯರ ನಿರೂಪ . . . . . ಣಕ . . . . . . . ಮುಳುವಾಯ . . . . . ಳು ಶ್ರೀ ಸೋಮನಾಥ ಪುರವನು ಧಾರೆಯ ಎಱದು ಧಂರ್ಮ ಶಾಸನವನು ಕೊಟರಾಗಿ ಆ ಗ್ರಾಮದಲಿ ಹುಟಿದ ಸಕಲ ಸುವಂನಾದಾಯ

4 ಸಕಲ . . . . . . . . . . ಕ . . ರದಲು ಸೋಮೇಶ್ವರನ ಉದಿಯಕಾಲದ ದಧ್ಯಂನದ ನೈವೇದ್ಯಕೆ . . . . . . ವೇದ . . . . . . ಸ್ಥಾನಿಕ ಚಿಪಣಜೀಯನ . . . . . . . . . . ಬಂದ . . . . . . . . . ಭ . . . . . . . . ಬಂದು . . . . . ಅರ್ಚಕ ನೈನಾಶಿ ಸೋಮನಗೆ ಒಂದು ಉಪ . . . ಅರ್ಚಕ . . . . ಳುವ ಮಗ ಲಿಂಗಯನಿಗೆ ಅರ್ಧ ಅವು ಸ

5 . . . ವಾಗಿ ಸೋಮಣನಿಗೆ ಅ . . . . . ಪ್ರಮಾಣದಲಿ ನಯ . . . . . ಉಪ . . . ಯಲಿ ಅನುಭವಿಸುವುದು ಈ ಧಂ

6 . . . . ಆಚಂದ್ರಾರ್ಕ ಸ್ಥಾಯಿಯಾಗಿ . . . . ಪುತ್ರ ಪೌತ್ರ ಪರಂಪರೆಯಾಗಿ ನಡೆಯಲುಳದು ಈ ಧರ್ಮಕೆ ಅ

7 ರೊಬ್ಬನು ಅಳುಪಿದರೂ ಗಂಗೆಯ ತಡಿಯಲಿ ಗೋಉ ಬ್ರಾಂಹಣರ ವಧಿಸಿದ ಪಾಪದಲಿ ಹೋಹರು

## 44 *b*; 48; 49 *a*;

ಆವನಿ ಹೋಬಳಿ ಆವನಿಗ್ರಾಮದ ರಾಮೇಶ್ವರ ದೇವಸ್ಥಾನದ ತಳಹದಿ ಕಲ್ಲಿನಲ್ಲಿ.

ಗ್ರಂಥ ಮತ್ತು ಅವರಕ್ಷರ

## 72–73

ಆವನಿ ಬೆಟ್ಟದಲ್ಲಿ ಏಕಾಂತ ರಾಮೇಶ್ವರ ದೇವಸ್ಥಾನದ ಬಾಗಿಲ ಸುತ್ತಲೂ ಬರೆದಿರುವುದು.

ಗ್ರಂಥ ಮತ್ತು ಅರವಕ್ಷರ

## 219

ಬೈರಕೂರು ಹೋಬಳಿ ನಂಗಲಿ ಗ್ರಾಮದ ಗೋಪಾಲಕೃಷ್ಣ ದೇವಸ್ಥಾನದಲ್ಲಿ.

ಗ್ರಂಥಾಕ್ಷರ

# New Inscriptions.

ಹೊಸ ಶಾಸನಗಳು.

## 267

ಮುಳಬಾಗಿಲಿನಲ್ಲಿ ಆಂಜನೇಯ ದೇವಸ್ಥಾನದ ಮುಖ ಮಂಟಪದ ಮೇಲುಗಡೆ ಉತ್ತರಕ್ಕೆ ಗಾರೆಯಲ್ಲಿ.

1 ಸನ್ ೧೮೭೪ನೆ ಯಿಸಿವಿ ಜನವರಿ ತಾರಿ
2 ಕು ೩ನೆ ಮಂಗಳವಾರ ಪೂ
3 ರ್ತಿ

## 268

ಅದೇ ಕಡೆ ಗಾರೆ ವಿಗ್ರಹಗಳ ಕೆಳಗೆ

ಮಚ್ಛಾವತಾರಂ

## 269

ಕೂರ್ಮಾವತರಂ

## 270

ವರಾಹಮೂರ್ತಿ

## 271

ನರಸಿಂಹಮೂರ್ತಿ

## 272

ವಾಮನ ಮೂರ್ತಿ

## 273

ಪರಶುರಾಮ ಮೂರ್ತಿ

## 274

1 ಕಾಳಿಂಗ ಮರ್ದನಂ
2 ಶ್ರೀ ಕೃಷ್ಣಮೂರ್ತಿ

## 275

1 ಕಲ್ಕ್ಯಾವತಾರಂ
2 ಶ್ರೀ ಕೃಷ್ಣಮೂರ್ತಿ

## 276

ಅದೇ ದೇವಸ್ಥಾನದ ದೊಡ್ಡ ಗಂಟೆಯ ಮೇಲೆ.

1 ಸುಬೇದಾರ್ ಅನುಮಂತು—ಶೇವ ॥ ॥
2 ಮೀಚೆಗೋತ್ರ ಕೋಲಾರ್—ತಿಂಮಮ್ಮ ೭೭ ನಂ ॥

## 277

ಅದೇ ದೇವಾಲಯದ ಸುಕನಾಸಿಯ ಬಾಗಿಲವಾಡದ ಮೇಲೆ.

ಶ್ರೀ

1 ಆಂಜನೇಯ
2 ಶಾ॥ ೧೭೮೮
3 ನೆ ಅಕ್ಷಯ
4 ಸಂ॥ ಮಾಘ
5 ಶು ೫ ಲ್ಲು ಸು
6 ಬೇದಾರು ಮ
7 ದ್ದೂರು ಪುಟ್ಟೆತ್ರಿ
8 ಯನ ತಾಯಿ
9 ಜವನಂಮ್ಮ
10 ನ ಶೇವೆ ॥ ಶ್ರೀ ॥

## 278

ಅದೇ ಸುಕನಾಸಿಯ ಬಾಗಿಲ ಚವುಕಟ್ಟು ಮೇಲೆ.

1 ಶ್ರೀ ಆಂಜನೇಯ ಸ್ವಾಮಿಕಿ ಮುಳವಾ
2 ಗಿಲು ತಾಲೂಕು
3 ಕಸಭ ಹೋಬಿಳಿ ಲಿಂಗಾಪೂರಂ ಮರ್ರಪಗಾರಿ ವೆಂಕ
4 ಟಪ ಕೊಮಾರುಡು ನಾಗೆಗೌನಿ ಶೇವಾ
5 ಸನ್ ೧೮೭೧ ಜನವರಿ ತಾರಿಕು ೨೫ಲ್ಲು ಪ್ರವೊದುತ
6 ನಾಮ ಸಂ॥ ಮಘ ಶು ೫ ರಲ್ಲು ಪಾಂಚಾನನಂ ವಿಟ್ಲಂ ನಾರಣಪಾ ನಿರ್ಮಿತಾಂ

## 279

ಅದೇ ಸುಕನಾಸಿಯಲ್ಲಿರುವ ರಾಮದೇವರ ಮಂಟಪದ ಹಿತ್ತಾಳೆ ಪೀಠದಲ್ಲಿ.

ಶ್ರೀ ವಿಕಾರಿ ಸಂ। ಕಾರ್ತೀಕ ಶು ೧೦ ಲು ಮು। ಶ್ರೀ। ಅಂ। ಕೋಲಾರು। ತಿಂ। ವೀರಪ್ಪ। ಕೊ। ಲಕ್ಷ್ಮಯ್ಯನ ಕೊಮಾರ ವೆಂಕಟಯ್ಯ ಶೆಟ್ಟಿ ಸೇವ। ಜೀರ್ಣೋದ್ಧಾರದು ಸೇವೆ। ೧೧-೧೨-೯೯.

## 280

ಅದೇ ದೇವಾಲಯದ ಆನೆಯ ಬಾಗಿಲ ಚವುಕಟ್ಟಿನ ಹಿತ್ತಾಳೆ ತಗಡಿನಲ್ಲಿ—ಉತ್ತರ ಕಡೆ.

**ಶ್ರೀ ರಾಮ**

1 ಶಾಲಿವಾಹನ ಶಖ ೧೮೦೮
2 ಕಿ ಸರಿಯ್ಯೆನ ವ್ಯಯ ನಾಮ
3 ಸಂವತ್ಸರ ಆಶ್ವಿಜ ಶು ೧ ಯ
4 ಲು ಶ್ರೀ ಅಂಜನೆಯ ಸ್ವಮಿವಾ
5 ರಿಕಿ ಕಸಬಾ ಮುಳಬಾಗಲು
6 ಲೊ ಪುಂಡೆ ಕೊಪ್ಪರಂ ಶಿನಿ ಶೆಟ್ಲಿ
7 ಗೋತ್ರೋದ್ಭವುಡ್ಯೆನ ಚಿಂನ್ನ ಅ
8 ಪ್ಪಯ್ಯ ಕೊಮಾರುಡು ಚಿಂ
9 ನ್ನ ರಂಗೈಯ್ಯ ಶೇವಾ॥ ಸ೯ ೧೮೮೭
ಯ್ಸವಿ ಶಪಟಂಬರು ತಾರ್ಕು ೨೮

## 281

ಅದೇ ದೇವಾಲಯದ ಗರ್ಭಗುಡಿ ಬಾಗಿಲ ಎಡಭಾಗದ ಹಿತ್ತಾಳೆ ತಗಡಿನ ಮೇಲೆ.

1 ಶ್ರೀರಾಮ
2 ಶಾ। ೧೭೬೧ನೆ ಶುಕ್ಲ ಸಂ। ರ ಪುಷ್ಯ
3 ಶುದ್ಧ ೫—ಮುಳುಬಾಗಲ್ ತಾಲ್ಲುಕು ಮಾ
4 ಮಲೆದಾರ—ವೆಂಕಟಸುಬಯ್ಯ
5 ॥ ನವರ ಸೇವೆ
6 ಧರ್ಮಪತ್ನಿ ಮಹಾಲಕ್ಷ್ಮಮ್ಮ।
7 ತುಮಕೂರು ತಾ। ಲಕ್ಕಿನಹಳ್ಳಿ

## 282

ಅದೇ ದೇವಾಲಯದ ಆನೆಯ ಬಾಗಿಲ ಮೆಟ್ಟಲು ತಗಡಿನಲ್ಲಿ

1 ಶ್ರೀರಾಮಾ
2 ಸ೯ ೧೮೮೯ ಕಿ ಸರಿ
3 ಯ್ಯೆನ ವಿಕಾರಿ ಸಂ
4 ಶ್ರಾವಣ ಶುದ ೭ ಯ
5 ಲು ಶ್ರೀ ಅಂಜನಯ
6 ಸ್ವಾಮಿವಾರಿಕಿ ಕೊಂ
7 ಡಿಗಿ ಶಲ ಗೋತ್ರೋದ್ಭ
8 ವುಡ್ಯೆನ ಪುಟ .
9 ಯೆತಪ್ಪ ಶೆಟಸೆ .

## 283

ಮುಳಬಾಗಿಲು ಕಸಬ ವಿಠಲನಾರಾಯಣಸ್ವಾಮಿಯ ದೇವಸ್ಥಾನದ ಎಡಗಡೆ ನಿಲ್ಲಿಸಿರುವ ಕಲ್ಲು.

ಪ್ರಮಾಣ 8′×2′

1 ಶುಭಮಸ್ತು ನಮಸ್ತುಂಗ ಶಿರ ಚು
2 ೦ಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರ

3 ಂಭಾ ಮೂಲಸ್ತಂಭಾಯ ಶಂಭವೇ . . . .
4 ಯಾದ್ಭುದಯ ಶಾಲಿವಾಹನ ಶಕ ೧೪೭೬ನೆಯ ಪರಾ
5 ಭವ ಸಂವಛರದ ಮಾಘ . . ಲೂ ಶ್ರೀಮರ್ನ್ ಮಹಾರಾ
6 ಜಾಧಿರಾಜ ಪರಮೇಶ್ವರ ಶ್ರೀವೀರಪ್ರತಾಪ
7 ಶ್ರೀ ಸದಾಶಿವರಾಯ ಮಹಾರಾಯರು ಪ್ರಿಥ್ವೀರಾಜ್ಯಂ
8 ಗೆ ಉತ್ತಂ ಯಿರಲು ಆತ್ರೇಯಗೋತ್ರದ ಆಶ್ವಲಾಯನ ಸೂತ್ರದ
9 ಯಜು ಶಾಖಾಧ್ಯಾಯಿಗಳಾದ ಶ್ರೀಮನ್ಮಹಾಮಂಡಲೇಶ್ವರನ
10 . ದ್ಯಾಲದ ವರದ ರಂಗರಾಜಗಳ ಮಕ್ಕಳು ತಿಂಮ
11 ರಾಜಗಳು ತಂಮ ನಾಯಕತನಕೆ ಸಲುವ ಮುಳವಾಗಿ
12 ಲ ರಾಜ್ಯದ ನಾನಾ ಗೋತ್ರದ ನಾನಾ ಸೂತ್ರದ ನಾನಾ ಶಾಖೆ
13 ಯ ನಾನಾ ಬ್ರಾಂಹರ ಮಠ ಮತಗಳ ಅಶೇಷ ವಿದ್ವನ್ಮಹಾ
14 ಜನೇಭ್ಯಃ ಕೊಟ್ಟ ಧರ್ಮಶಾಸನ ಕ್ರಮವೆಂತೆಂದರೆ ಸಿ . .
15 ಮುಳುವಾಗಿಲ ರಾಜ್ಯದ ಅಗ್ರಹಾರಗಳ ಆ . ಸರ್ವಮಾನ್ಯ
16 ವಾಗಿ ನಡದು . ಮ . ಮ . . . ದ ಪಾರುಪತ್ಯಗಾ
17 ಊ . . ನ್ಯಯದಲಿ ಬೆಡಿಗೆಯಾಗಿ ಬೆಡಿಕೊಂಡು ಬಂದು ರಾ
18 . . ನೆಯಮಾ ನೀವು ಅಶೇಷ ಮಹಾಜನಗಳು ಕೂಡಿಯಾ
19 ತೆರಿಗೆಯನು ಬಿಡಬೇಕು ಎಂದು ಹೇಳಲಾಗಿ ನಾವು ನಿಮಗೆ
20 ಆ ಬೇಡಿಗೆಯನೂ ನಿಮಗೆ ದಾರನೆಱದು ಕೊಟ್ಟೆವಾಗಿ ನೀ
21 ವು ಈ ಅಗ್ರಹಾರಗಳನೂ ತಮ್ಮ ಮರಿಯಾದೆಯಲಿ ಸರ್ವ
22 ಮಾನ್ಯವಾಗಿ ಪುತ್ರ ಪವುತ್ರ ಪಾರಂಪರೆಯಾಗಿ .
23 ಚಂದ್ರಾರ್ಕಸ್ತಾಇಯಾಗಿ ಅನುಭವಿಸಲುಳವರು
24 ಯೀಧರ್ಮಕೆ ಮುಂದೆ ಆವನೊಬ್ಬ ಅಳುಪಿದವ
25 ನು ತಂಮ ತಾಯಿ ಫೊಡವುಟ್ಟಿದವರಿಗೆ ತಪಿದವ
26 ರು ಕಾಶಿಕ್ಷೇತ್ರದಲಿ ಗೋವಿಪ್ರವಧೆಯ ಮಾಡಿದ ಪಾ
27 ಪಕೆ ಹೋಹರೂ ಎಂದು ಒಡಂಬಟ್ಟು ಕೊಟ್ಟ ಧ
28 ರ್ಮ ಶಾಸನಾ॥ ದಾನ ಪಾಲನಯೋರ್ಮಧ್ಯೇ ದಾನಾ
29 ಛ್ರೇಯೋನುಪಾಲನಂ। ದಾನಾತ್ಸ್ವರ್ಗ ಮವಾಪ್ನೋತಿ ಪಾಲ
30 ನಾದಚ್ಯುತಂ ಪದಂ। ಏಕೈವ ಭಗಿನೀ ಲೋಕೇ ಸರ್ವೇಷಾ
31 ಮೇವ ಭೂಭುಜಾಂ ನಭೋಜ್ಯಾ ನ ಕರಗ್ರಾಹ್ಯಾ ವಿಪ್ರದ
32 ತ್ತಾ ವಸುಂಧರಾ। ಆತ್ರೆಯಾನ್ವಯ ಸಂಭವೋ ಬುಧವರ
33 ಶ್ರೀರಂಗರಾಜಾತ್ಮಜೋ ಆಯುರ್ವೇದ ವಿಧಿಕ್ರಿಯಾತಿ ಕುಶ
34 ಲಃ ಕರ್ಮತ್ರಯಸ್ತ ಸುಧೀಃ। ವಿಖ್ಯಾತೋ ಭುವಿದಿಕ್ಷು ಧಾರ್ಮಿಕ
35 ಇತಿ ಶ್ರೀ ತಿಂಮರಾಜಾಹ್ವಯಂ ಮಾನ್ಯಾಂ ಕ್ಷತ್ರ ಕುಲೋ
36 ದ್ಭವೋ ವಿಜಯತೇ ಕೃತ್ವಾಗ್ರಹಾರಾಂ ಜಯ॥ ಶ್ರೀ ಶ್ರೀ

## 284

ಮುಳಬಾಗಿಲು ಬೆಟ್ಟದ ಬಾಬ್ಯೆಯನ ಗುಂಡಿನ ಮೇಲೆ ಪಂಜದ ಬಳಿ.

1 ಗುಜನಪಳಿ
2 ಕಲು ತಿಂಮಯ

## 285

ಕಸಬಾ ಹೋಬಳಿ ಸೋಮೇದೇವರ ಪಾಳ್ಯದ ಸೋಮೇಶ್ವರ ದೇವಸ್ಥಾನದ ಮಹಾದ್ವಾರದ ದಕ್ಷಿಣಕಡೆ ಜಗಲಿಯ ಗೋಡೆ ಕಲ್ಲಿನಲ್ಲಿ.

1 . . . . . . . . . .
2 . . . . . . ಯಬನಿ . . ಯ
3 ಹೋಗಲುಳವರು ತಂಮ . . . .
4 . . . . . . . . . .
5 . . . . . . . . . .

(ಪುಟ್ಟೀಲುಕಲ್ಲು ಮರೆಯಾಗಿರುವುದರಿಂದಲೂ ಸುಣ್ಣ ಬಳದು ಇರುವುದರಿಂದಲೂ ಓದಲು ಅಸಾಧ್ಯ)

## 286

ಅದೇ ದೇವಾಲಯದಲ್ಲಿ 20ನೇ ನಂಬರ್ ಶಾಸನದ ಮೇಲ್ಭಾಗದಲ್ಲಿ.

. . ಕ್ರ . ರಾಮಪ ತಪದೆ ೨ ವಿಳೆಯವ ನಡೆಸಲುಳವನು

## 287

ಅದೇ ದೇವಾಲಯದ ದಕ್ಷಿಣ ಹೊರಭಿತ್ತಿಯ ಆಗ್ನೇಯ ಮೂಲೆಯಲ್ಲಿ.

1 . . . . ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಶ ೧೪೫೨ನೆಯ ದುರ್ಮುಕಿ ಸಂವತ್ಸರದ ಚೈತ್ರ ಬ .
2 ಶ್ರೀ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ವೀರಪ್ರತಾಪ ಅಚ್ಯುತರಾಯ ಮಹಾರಾಯರು ಪೃತ್ವೀರಾಜ್ಯಂ ಗೈಉತ್ತಿರಲು
3 . . . . . . ರು ಸೋಮೇಶ್ವರ . . . . . .
. . . . . . .
4 . . . . . . . . . . . . . . . . . . . .

## 288

ಅದೇ ದೇವಾಲಯದಲ್ಲಿ ಬಾಗಿಲ ಹಿಂದೆ.

1 ಸೋಮ . . . . .
2 . . . ಲಿಂಗಯ .
3 . . . . . . .

## 289

ಅದೇ ದೇವಾಲಯದ ಮುಖಮಂಟದಲ್ಲಿರುವ ಕಲ್ಲು.

(ಮೇಲು ಭಾಗ ಹೋಗಿದೆ)

1 . . . . ರಮರು . . .
2 . . . . ಡಟಾರಾಜ್ಯಂ .
3 . . . . ವರಗೆಂದ .
(ಮುಂದೆ ಹೋಗಿದೆ)

## 290

ಆವನಿ ಹೋಬಳಿ ಆವನಿ ಗ್ರಾಮದಲ್ಲಿ ದೇವಸ್ಥಾನದ ಕಲ್ಯಾಣ ಮಂಟಪದ ಆಗ್ನೇಯಭಾಗದ ಕಲ್ಲಿನಲ್ಲಿ.

1 ಶ್ರಿ ರಾಮಲಿಂಗಸ್ವಾಮಿ ವೆನ
2 ಕ ವುಂಡೆ ತೋಟತು ಯೆನುಗ
3 ಚಿಂನಪ್ಪ ಯಿಸ ಪೂಗವರದ
4 ಪಕು ಚೆರಿನ ಯಿಸ ರಾ
5 ಹುಲಿಂಗ ಸ್ವಾಮಿಕಿ ಧ

## 291

ಅದೇ ಗ್ರಾಮದಲ್ಲಿ ಅಮ್ಮನವರ ದೇವಾಲಯದಲ್ಲಿ ಚಿಕ್ಕ ಬಸವಗಳ ಎದುರಿಗೆ ಹಾಸಿರುವ ಕಲ್ಲುಗಳು—

ಬಲಗಡೆ ಬಸವನ ಎದುರಿಗೆ.

1 ಸರ್ವಜಿತು ಸಂವ
2 ತ್ಸರದ ಮಾಘ ಸುದ್ಧ

3 ೧೧ ಲು ಶ್ರೀಮತು ಕಾ
4 ಮ ದೇವನ ಪಲ್ಲೆಯಳ ಚೆ
5 ರಪ್ಪಗೌನಿ ಪುಣ್ಯ ಶ್ರಿಯ
6 ಳಯಪ್ಪನ ಪುತ್ರಲ್ರೈನ
7 ಕೊಮಾರುಡು ಗೊಳಪ್ಪ
8 ಗೌಡು ಬಸವೇಶ್ವರುನಿ ಮ
9 ಹದೇವುನಿಕಿ ಸಮರ್ಪಕಂ
10 ಶರ

## 292

ಅದೇ ದೇವಸ್ಥಾನದಲ್ಲಿ ಎಡಗಡೆ ಬಸವನ ಕೆಳಗೆ.

1 ಯುವ ಸಂಹಚ್ಸರದ
2 ಮಾಘ ಸುದ್ಧ ೧೧ಲು ಸ್ರಿ
3 ಮಸ್ತು ಸಿರಿಬೊಳ್ಳ
4 ಶಂಭು ಲಿಂಗನಿವರಕೊಮಾ
5 ರುಡು ಸಂಬಯುಲನೆ ಬೊಂ
6 ಮ್ಮಲಾಟ ಮೋಹನ ಕವಿ ಪು
7 ಣ್ಯ ಶ್ರೀಕುಂದಿರಿವಿ ವೀರೇಶ್ವ
8 ರುನಿ ವರ ಕೊಮಾರ್ತಿ ವೀರಂ
9 ಮ ೨ ಬಸವೇಶ್ವರುನಿ ಮಹದೇ
10 ವುನಿಕಿ ಸಮರ್ಪಕಂ ಸೇಶನೂ

## 293

ಅದೇ ಗ್ರಾಮದಲ್ಲಿ ಲಕ್ಷ್ಮಣೇಶ್ವರ ದೇವಸ್ಥಾನದ ಮುಂದೆ ಬಾಗಿಲಿಗೆ ಬಲಭಾಗದ ಪಂಚಾಗ ಜಗತೀ ಕಲ್ಲಿನಲ್ಲಿ.

ಸ್ವಸ್ತಿ ಶ್ರೀ ತ್ರಿಭುವನದೇವಂ

## 294

ಅದೇ ಸ್ಥಳದಲ್ಲಿ ದಕ್ಷಿಣಕ್ಕೆ.

ಸ್ವಸ್ತಿ ಶ್ರೀ ವೀರನೊಬ್ಬಮ್ಮಂ

## 295

ಅದೇ ಗ್ರಾಮದಲ್ಲಿ ಏಕಾಂತ ರಾಮೇಶ್ವರ ದೇವಸ್ಥಾನದ ಗರ್ಭಗೃಹದ ಬಾಗಿಲವಾಡದ ಕಲ್ಲಿನ ಮೇಲೆ.

1 . . . . . . . . .
2 ಶಕ ವರುಷ ೧೪೫೪ ನೆಯ ನಂದನ ಸಂವತ್ಸರ . . . . . ಅ . . ತತಕ್ಷಹಾರಾ . . . . . .
3 . . . . ರ . . ನ ಅಯನ . . . . . . . . ಗೆ ಆಮನಿ ನಾಡುಗಳ . . .
4 . . . . . . . . . .
5 . . . . . . . . . .
6 . . . . . . . ಮ . .

(ಮುಂದೆ ಕಾಣುವುದಿಲ್ಲ)

## 296

ಅದೇ ಗ್ರಾಮದಲ್ಲಿ ಗಿಂಡೀ ತೀರ್ಥಕ್ಕೆ ಪಶ್ಚಿಮ ಬಂಡೆಯ ಮೇಲೆ 65ನೇ ನಂಬರಿನ ಮೇಲ್ಭಾಗದಲ್ಲಿ.

ಸುಜನಯ್ಯ ಮಿತ್ರ ಮನ್ದಯ್ಯ

**297**

ಅದೇ ಸ್ಥಳದಲ್ಲಿ ದಕ್ಷಿಣಕ್ಕೆ.

ಸ್ವಸ್ತಿ ಶ್ರೀ ದಾವಯ್ಯ

**298**

ಅದರ ಕೆಳಗೆ.

ಆಚರ ಮೊಣೂರಿದ

**299**

ಅದರ ಕೆಳಗೆ.

ಸ್ವಸ್ತಿ ಶ್ರೀ . ರದಯ್ಯ

**300**

ಅದೇ ಬಂಡೆಯ ಮೇಲೆ 68 ನೇ ನಂಬರಿನ ಕೆಳಭಾಗದಲ್ಲಿ.

1 ಉಲವಂಕ ನಾಡ
2 ಪ್ರಭು ಇಂಮಡಿ , .
3 ಅ . . ಯನು

**301**

ಅದೇ ಸ್ಥಳದಲ್ಲಿ ಮೇಲ್ಭಾಗದಲ್ಲಿ.

. . . ರಾಮರಸರ ನರಸಯ್ಯನ ಮಗ ಲಕ್ಷ್ಮಯ್ಯನು

**302-303**

ಅದೇ ಗ್ರಾಮದ ನಾಗರ ಕುಂಟೆಯ ದಕ್ಷಿಣ ಮಂಟಪದ ತಳಹದಿಯಲ್ಲಿ ಉತ್ತರದ ಕಡೆ ಮತ್ತು ದಕ್ಷಿಣದ ಕಡೆ.

ಗ್ರಂಥ ಮತ್ತು ಅರವಕ್ಷರ

**304**

ಅದೇ ನಾಗರಕುಂಟೆಯ ಪಶ್ಚಿಮಕ್ಕೆ 62 ನೇ ನಂಬರಿನ ಕೆಳಭಾಗದಲ್ಲಿ.

1 ಯಿಂಮಡಿ ತಂಮಯ ಗೌಡರ ಪುಂಣ್ಯ ವೀ
2 ದು ಭವಮನೆ ಮಗಳು
3 ಕೆಂಪಮನು ಕಾಶಿ ಅಮ್ರು
4 ತ ಮಲ್ಲಿಕಾರ್ಜುನಗೆ ಎ
5 ಜ್ಞ ಮೊಡಿಸ್ತಳು

**305**

ಅದೇ ಸ್ಥಳದಲ್ಲಿ ಹುಣಿಸೇಮರದ ಕೆಳಗೆ ನಿಲ್ಲಿಸಿರುವ ಕಂಭದ ಸುತ್ತಲೂ.

ಯೂಪ ಕಂಭ.

## 306

ಅದೇ ನಾಗರ ಕುಂಟೆಗೆ ಪಶ್ಚಿಮ ಮಠದ ಹೊಲದಲ್ಲಿ ಒಂದನೆಯ ವೀರಗಲ್ಲು.

1 ಸ್ವಸ್ತಿ ಶ್ರೀ ದಿಲಿಪಯ್ಯಂ ಪ್ರಿಥಿವಿರಾಜ್ಯಂಗಯೆ ತ್ರಿಬುವನ ಕ
2 ರ್ತ್ತಾರ ಬಟಾರರ್ತ್ತ ಪರಾಜ್ಯಂ ಗೆಯ್ಯುತ್ತಿರೆ ಗಂಗವಾಡಿ ತೊಮ್ಬತ್ತಱು ಸಾ
3 ಸಿರವುಂ ಬಾಣರವಾಡಿ ಪನ್ನಿರ್ಚ್ಚಾಶಿರದ ಬಳಂಜಮೆಲ್ಲ ನೆರದನು ಪ
4 ವನ ಸೆಟ್ಟರೊಳ್ಕಾದಿದನ್ದು ಅಯ್ದ ಬಾಮ್ವೊಶರಾಜ ಆರನ್ದೆ ಕಾದಿ ಸತ್ತು ಸರ್ಗ್ಗದೊಳಿಟ್ಡನ್

## 307

ಅದೇ ಸ್ಥಳದಲ್ಲಿ ಎರಡನೆಯ ವೀರಗಲ್ಲು.

1 ಶ್ರೀಮಾನೊಲಪಯ್ಯ ಪೃಥಿವೀರಾಜ್ಯಂಗೆಯ್ಯೆ
2 ಬಲ್ಲದ ತುಱುವ ಮೊಱುಕರ್ಕ್ಕೊಳೆ ಬೆ
3 ಣ್ಡರ ಮಾಕಿ ಕಾದಿ ಇಕ್ಕಿಸಿ
4 ಸತ್ತು ಸ
5 ಗ್ಗರ್ಸ್ಥ
6 ನಾದಂ।

## 308

ಅದೇ ಗ್ರಾಮದಲ್ಲಿ ಆವನಿಕೆರೆಯ ಉತ್ತರ ಕಡೆ ತೂಬಿನ ಮೇಲೆ ಪೂರ್ವದಿಕ್ಕು.

1 ಸ್ವ ತ ಶ್ರೀ ಸಂಗಮಜ್ಜದ ಮೆಮ್ಮಗಳ್ ಮೆಲಕೆರಿ ಒಡಯ ದುಗ್ಗಬ್ಬೆ ತುಮ್ಬು ಮಾಡಿಸಿದಾಳ್
2 ಮರಜನ್ ಬೆಸಗೆಯ್ದ

## 309

ಅದೇ ಹೋಬಳಿ ಆವನಿ ಬೆಟ್ಟಕ್ಕೆ ಹತ್ತುವ ದಾರಿಯಲ್ಲಿ ತೊಟ್ಟಲ ಗುಂಡಿಗೆ ಪೂರ್ವ ಗುಂಡಿನ ಕೆಳಗೆ.

1 ವಿರೋಧಿಕೃತು ಸಂವ್ವತ್ಸರ ಆಷಾಢ ಬ ೨ ಉ
2 ತರುಗೊಂಡ ವೆಂಕಟಾದ್ರಿ ನಾಯುನಿ
3 ಕುಮಾರು ವೆಂಕಟಪ್ಪ ನಾಯುನಿ ಕುಮಾ
4 ರುಂಡು ಪಾಬನಾಯಕಿ . ಶೀತಂಮ ಚೇಶಿನದಿ

## 310

ಅದೇ ಬೆಟ್ಟದ ಮೇಲೆ ಧನುಷ್ಕೋಟಿ ಬಂಡೆಯ ಮೇಲೆ ಪಾದಗಳ ಬಳಿ.

1 ವಿಷ್ಣು ಪದಮು
2 ರುದ್ರಪದಮು
3 ರಾಮಪದಂ
4 ಸೀತಪದಮು
5 ಕಾರ್ತಿಕೇಯಪದಂ
6 ಕಾಮದೇವ ಪದಂ
7 ವಾಲ್ಮೀಕಿ ಪದಂ
8 ಸೂರನ ಪದ
9 ಕ್ರೌಂಚ ಪದ
10 ಪಾವಕಿ
11 ಶಿವಸಭ್ಯ
12 ಗದಾಧರಸ್ವಾಮಿ
13 ದಕ್ಷಿಣಾಗ್ನಿ
14 ಆಹವನಿಯ
15 ಗಾರುಹಪತ್ಯ
16 ಅಗ್ನಿತ್ರಯ

## 311

ಅದೇ ಬಂಡೆಯಮೇಲೆ.

ಶುಭಕೃತು ಸಂವತ್ಸರಂ ಮಾಘ ಬಹುಳ ೧೫ ಪೆದ ಆಪ್ಪಯ ಶೀತಾರಾಮೇಶ್ವರುಲಕು ನಿತ್ಯನಮಸ್ಕಾರಂ

## 312

ಅದೇ ಬಂಡೆಯ ಮೇಲೆ ಮತ್ತೊಂದು ಕಡೆ.

1 ದುರಿತಲ ನುಂನಯು
2 ಪೆದಪಾಲಂಚಯ . ಮ
3 ಪೆ ಗೌಡು ಅರಪಯ
4 . ಅಪ್ಪಕೊಂಡಯು

## 313

ಆದೇ ಬೆಟ್ಟದ ಶಿಖರದ ಮೇಲೆ ಸೀತಾಪಾರ್ವತೀ ಗುಡಿಯ ಮುಂದೆ.

. ನ ಕೊನೆಟಿಯ ಕಂಬಯ ಕೊವಾರುಡು ಚಿಕ . . . ದ್ರ.

## 314

ಅದೇ ಗುಡಿಯ ಹಿಂಭಾಗದ ಬಂಡೆಯ ಮೇಲೆ.

1 ನದಿಚ ಉನಿದ ಮದಾ
2 ವಿ ಅಪಯ . .
3 ಯಕ ಎಯ

## 315

ಅದೇ ಬೆಟ್ಟದ ಮೇಲೆ ಕುಶಲವರ ಗುಡಿಯಲ್ಲಿ.

1 ಅಯ್ಯಣ ಗೌಂಡ
2 ಮದಲೆ ದತ್ತನುಂಬೆಗೌ
3 ದೆ ವವ . . . . . .
4 ಯ . . . . . ಸ ಅವರಿಗೆ ಪು
5 . . . . . . . . . .
6 . . . . . . . . . .ದೂ

## 316-324

ಅದೇ ಬೆಟ್ಟದ ಮೇಲೆ ಏಕಾಂತ ರಾಮೇಶ್ವರ ಮತ್ತು ಪಾಂಡವೇಶ್ವರ ದೇವಾಲಯಗಳಲ್ಲಿರುವ ಶಾಸನಗಳು.

ಗ್ರಂಥ ಮತ್ತು ಅರವಕ್ಷರ

## 325

ಆವನಿ ಹೋಬಳಿ ವಿರೂಪಾಕ್ಷಪುರದ ದೇವಾಲಯದ ಮಹಾಪ್ರಾಕಾರದ ದಕ್ಷಿಣ ದಿಕ್ಕಿನಲ್ಲಿ ಒರಳುಗಳ ಪಕ್ಕದಲ್ಲಿ.

1 ಗುಡಿ ಪಾರ್ವತಿ ಅಂಮ್ಮ
2 ನವುಭಯೂ

## 326

ಅದರ ಮೇಲ್ಭಾಗದಲ್ಲಿ.

1 ಗುಡಿ ವಿರುಪಂ
2 ಮ್ಮನ ವುಭಯೂ

## 327

### ದುಗ್ಗಸಂದ್ರ ಹೋಬಳಿ ಕುರುಡುಮಲೆಯಲ್ಲಿ ವಿಘ್ನೇಶ್ವರ ದೇವಸ್ಥಾನದ ಮುಂದುಗಡೆ ಮೂಷಿಕದ ಮುಂದೆ

1 ಕುರಿಡಿಮಲ ಸ್ತನಿಕು
2 ಡು ಚಂದ್ರ
3 ಶೇಖರಯ್ಯ
4 ಪೆಡ್ಡಾಲಮು
5 ಅರಮಾ
6 ಯಿ ವಿಘ್ನೇ
7 ಸ್ವರುನಿಕಿ
8 ನಮಸ್ಕಾರಂ

## 328

### ದುಗ್ಗಸಂದ್ರದ ಹೋಬಳಿ ಉತ್ತನೂರಲ್ಲಿರುವ ಸಯ್ಯದ್ ಖಾಸಿಂ ಬಿನ್ ಸಯ್ಯದ್ ಜಮಾಲ್ ಎಂಬುವನ ಬಳಿ ಇರುವ ತಾಮ್ರ ಶಾಸನ

(5 ಹಲಗೆ ; ಆನೆಮೊಹರು ; ಉಂಗರ ಸಹಿತ)

ಪ್ರಮಾಣ : ಉದ್ದ 9¼″ ಅಗಲ 4″

(ಒಂದನೆಯ ಹಲಗೆಯ ಹಿಂಭಾಗ)

1 ಸ್ವಸ್ತಿ ಜಿತಮ್ಭಗವತ ಘನ ಗಗನಾಭೇನ ಪದ್ಮ
2 ನಾಭೇನ ಶ್ರೀ ಜಾನ್ಹವೇಯ ಕುಲಮಾಲ ವ್ಯೋಮವ
3 ಭಾಸನ ಭಸ್ಕರಸ್ಯ . ಸ್ವಖಾಡ್ಗೇಕ ಪ್ರಹರ ಖಣ್ಡಿತ ಮ
4 ಹ ಶಿಲಸ್ತಮ್ಭ ಬಲ ಪರಕ್ರಮಯಶಾಸ ದಾರುಣಾರಿ
5 ಗಣವಿದಾರುಣ ರಣೋಪಲಬ್ಧ ವ್ರಣವಿಭೂಷಣ ವಿಭೂ
6 ಷಿತಸ್ಯ ಕಾಣ್ವಾಯನಸ ಗೋತ್ರಸ್ಯ ಶ್ರೀ ಕೊಙ್ಗಣಿವರ್ಮ್ಮ ಧರ್ಮ್ಮ ಮಹಾಧಿರಾಜ
7 ಸ್ಯ ಪುತ್ರಸ್ಯ ಪಿತುರನ್ವಾಗತ ಗುಣಯುಕ್ತಸ್ಯ ವಿದ್ಯಾವಿನಯ ವಿಹಿತ ವೃ

(ಎರಡನೆಯ ಹಲಗೆಯ ಮುಂಭಾಗ)

8 ಸ್ಯ ಸಮ್ಯಕ್ಪ್ರಜಪಾಲನ ಮಾತ್ರಾಧಿಗತ ರಾಜ್ಯಪ್ರಯೋಜನಸ್ಯ
9 ನಾನಾ ಶಸ್ತ್ರಾರ್ತ್ಥ ಸದ್ಭಾವಾದಿಗಮ ಪ್ರಣೀತಮತಿ ವಿಶೇಷ
10 ಸ್ಯ ವಿದುತ್ಕವಿ ಕಾಞ್ಚನನಿಕಷೋಪಲ ಭೂತಸ್ಯ ವಿಶೇಷತೋಪ್ಯನ
11 ವ ಶೇಷತೋಸ್ಯ ನಶೇಷಸ್ಯ ನೀತಿಶಾಸ್ತ್ರ ವಕ್ತೃಪ್ರಯೋಕ್ತ ಕುಶಲ
12 ಸ್ಯ ಸುವಿಭಕ್ತ ಭಕ್ತ ಭೃತ್ಯಜನಸ್ಯ ದತ್ತಕಸೂತ್ರವೃತ್ತೇಃಪ್ರಣೇತು ಶ್ರೀ
13 ಮಾಧವ ಮಹಾಧಿರಾಜಸ್ಯ ಪುತ್ರಸ್ಯ ಪಿತೃ ಪೈತಾಮಹಗುಣಯುಕ್ತ
14 ಸ್ಯ ಅನೇಕ ಚಾತುರ್ದನ್ತ ಯುದ್ಧಾವಾಪ್ತ ಚತುರುದಧಿ ಸಲಿಲಾಸ್ವಾದಿತ

(ಎರಡನೆಯ ಹಲಗೆಯ ಹಿಂಭಾಗ)

15 ಯಶಸ ಸದದ್ವಿರದ ತುರಗಾರೋಹಣಾತಿಶಯೋತ್ಪನ್ನ ತೇಜಸು
16 ಧನುರಭಿಯೋಗ ಸಮ್ಪಾದಿತ ಸಮ್ಪದ್ವಿಶೇಷಸ್ಯ ಶ್ರೀಮದ್ಧರಿವರ್ಮ್ಮ
17 ಹಾಧಿರಾಜಸ್ಯ ಪುತ್ರಸ್ಯ ಗೋಬ್ರಾಹ್ಮಣಪೂಜಸ್ಯ ನಾರಾ
18 ಯಣ (ಮಹಾಧಿರಾಜಸ್ಯ ಅವಿನೀತನಾಮ್ನಃ ಪುತ್ರೇಣ ಪುನ್ನಾಟರಾ
19 ಜಸ್ಕನ್ದವರ್ಮ್ಮಪ್ರಿಯ ಪುತ್ರಿಕಾ ಜನ್ಮನಾ ಸ್ವ [ಗುರು] ಗುಣಾನುಗಾಮಿತಪ)
20 ಚರಣಾನುಧ್ಯಾತಸ್ಯ ಶ್ರೀಮದ್ವಿಷ್ಣುಗೋಪ ಮಹಾಧಿರಾಜಸ್ಯ ಪುತ್ರಸ್ಯ ತ್ರಿ
21 ಯಮ್ಬಕ ಚರಣಾಮ್ಭೋರುಹರಜಃಪವಿತ್ರೀ ಕೃತೋತ್ತಮಾಙ್ಗ

(ಮೂರನೆಯ ಹಲಗೆಯ ಮುಂಭಾಗ)

22 ಸ್ಯ ವ್ಯಾಯಾಮೋದ್ವೃತ್ತಪೀನ ಕಠಿನ ಭುಜದ್ವಯಸ್ಯ ಸ್ವಭುಜಬಲಪ
23 ರಾಕ್ರಮಕ್ರಯಕ್ರೀತರಜ್ಯಸ್ಯ ಕ್ಷುತ್ಕ್ಷಾಮೋಷ್ಮಪಿಶಿತಾಶನ ಪ್ರೀತಿಕರನಿಶಿತಧಾ
24 ರಾಸೇ ಕಲಿಯುಗ ಬಲಪಙ್ಕಾವಸನ್ನ ಧರ್ಮ್ಮವೃಷೋದ್ಧರಣ ನಿತ್ಯ ಸನ್ನದ್ಧಸ್ಯ ಶ್ರೀ
25 ಮನ್ಮಾಧವ ಮಹಾಧಿರಾಜಸ್ಯಾ ವಿಚ್ಛಿನ್ನಾಶ್ವಮೇಧಾವ ಭೃತೋಭಿಷಿಕ್ತ ಶ್ರೀಮತ್ಕದಮ್ಬಕುಲ
26 ಗಗನ ಗಭಸ್ತಿ ಮಾಲಿನ ಶ್ರೀ ಕೃಷ್ಣವರ್ಮ್ಮ ಧರ್ಮ್ಮ ಮಹಾಧಿರಾಜಸ್ಯ ಪ್ರಿಯ ಭಗಿನಯಸ್ಯ
27 ಜನನೀ ದೇವತಾಙ್ಕಪರ್ಯ್ಯಂಕ ಏವಾಧಿಗತರಾಜ್ಯಾಭಿಷೇಕಸ್ಯ ವಿಜೃಮ್ಭಾಣಶಕ್ತಿ
28 ತ್ರಯಸ್ಯ ಪರಸರಾನವ ಮರ್ದ್ದನಾಪ ಭುಜ್ಯಮಾನ ತ್ರಿವರ್ಗ್ಗ ಸರಸ್ಯಮ್ಭಮಾವನ
29 ಮಿತಸಮಸ್ತ ಸಾಮನ್ತಮಣ್ಡಲಸ್ಯ ನಿರನ್ತರ ಪ್ರಕೃತಿವರ್ಗ್ಗಸ್ಯ ವಿದ್ಯಾವಿನಯಾತಿ
30 ಶಯಪೂರಿತೋನ್ತರಾ

(ಮೂರನೆಯ ಹಲಗೆಯ ಹಿಂಭಾಗ)

31 ತ್ಮನ ಕರ್ತ್ತೃಯುಗೀನರಾಜ ಚರಿತಾವಲಮ್ಬಿನ ಅನೇಕ ಸಮರಯೋಪಾರ್ಜ್ಜಿತವಿಪು
32 ಲ ಯಶಕ್ಷೀರೋದ್ಯೈಕಾರ್ಣ್ಣವೀಕೃತೇ ಭುವನತ್ರಸ್ಯ ನಿರವಗ್ರಹ ಪ್ರದಾನಶೌರ್ಯ್ಯ ಅವಿಷ
33 ಹ್ಯ ಪರಾಕ್ರಮಾಕ್ರಾನ್ತ ಪ್ರತಿರಾಜಮಸ್ತಕಪಿತೋಪ್ರತಿಹತಶಾಸ್ಯ ವಿದ್ವತ್ಸುಪ್ರಥ
34 ಮಗಣ್ಯಸ್ಯ ಶ್ರೀಮತ್ಕೊಙ್ಗಣಿ ಮಹಧಿರಾಜಸ್ಯ ಅವನೀತನಾಮ್ನಃ ಪುತ್ರೇಣ
35 ಪುನ್ನಾಟರಾಸ್ಕನ್ದ ವರ್ಮ್ಮಪ್ರಿಪಪುತ್ರಿಕಾ ಜನ್ಮನಾ ಸ್ವ ಗುರು ಗುಣಾನುಗಾಮಿನಾ
36 ತ್ರಾದರಸುತ ಸಾಮಾವರ್ಜ್ಜಿತಯಾಪಿಲಕ್ಷ್ಮ್ಯಾಶ್ಯೆ ಸ್ವಯಮವಿ ಪ್ರತ್ಯಾಲಿಙ್ಗಿತ ವಿಪು
37 ವಿಪುಲವಕ್ಷಸ್ಥಲೇನ ವಿಜೃಮ್ಭಹಮಾಣ ಶಕ್ತಿತ್ರಯೋಪನಮಿತಸಮಸ್ತ
38 ಸಾಮನ್ತಮಣ್ಡಲೇನ ಆಂದಾರ್ಯ್ಯ ಆಲತ್ತೂರ ಪೊರುಳಱೆಯ ಪೆರ್ನ್ನಗರಾದ್ಯ

(ನಾಲ್ಕನೆಯ ಹಲಗೆಯ ಮುಂಭಾಗ)

39 ನೇಕ ಸಮರ ಮುಖ ಮಖಾಹೂತ ಪ್ರಹತಶೂರ ಪುರುಷ ಪಶೂಪಹರವಿಘಸ
40 ವಿಹಸ್ತೀಕೃತ ಕೃತಾನ್ತಾಗ್ನಿಮುಖೇನ ಶಬ್ದಾವತಾರ ಕಾರಣದೇವ ಭಾರತೀ ನಿಬದ್ಧವಡ್ಡ
41 ಕಥೇನ ಕಿರಾತೋಜ್ಜ್ಜನೀಯ ಪಞ್ಚದಶಸರ್ಗ್ಗ ಟೀಕಾಕಾರೇಣ ದುರ್ವ್ವಿನೀತನಾಮಧೇಯೇನ
42 ಸಮಸ್ತ ಪನ್ನಾಡ ಪುನ್ನಾಡಾಧಿಪತಿನಾ ವೈವಸ್ವತೇನೇವನುನಾ ವರ್ಣ್ನಾಶ್ರಮಾ
43 ಭಿರಕ್ಷಿಣಾನ್ಸಿದ್ಧಶಮಭಿಗೋಪ್ತು ಪರ್ಯ್ಯಾಪ್ತವತಾ ಪ್ರಾತಿಜಸೀನೇನ
44 ಸುಪ್ತಶಾ ಆತ್ಮನಚ್ಛ್ರವರ್ದ್ಧಮಾನೇ ವಿಂಶತ್ತಮೇ ವಿಜಯ ಸಂವತ್ಸರೇನಾತ್ತಿಕಮಾ
45 ಸೇ ಪೌರ್ಣ್ಣಮಾಸ್ಯಾನ್ತಿಥೌ ಕ್ರಿತ್ತಿಕಾ ನಕ್ಷತ್ರೇ ಅಭಿಜಿನ್ಮುಹೂರ್ತ್ತೇ ನಾನಗೋತ್ರೇಭ್ಯಾ
46 ತ್ಯೈತ್ರೀಯ ಚರಣೇಭ್ಯ ಪ್ರಾವಚ್ಛನ್ನ ಸೂತ್ರೇಭ್ಯಃ ವಿದ್ವತ್‌ಭ್ಯೋ ಬ್ರಾಮ್ಹಣೇಭ್ಯಃ

(ನಾಲ್ಕನೆಯ ಹಲಗೆಯ ಹಿಂಭಾಗ)

47 ಅವಿಚ್ಛಿನ್ನ ಸೋಮ ಪೀಥೇಭ್ಯಃ ಷಟ್ಕರ್ಮ್ಮ ನಿರತಸ್ಸಮ್ಪದುಪಪನ್ನೇಭ್ಯಃ ಅಶೀತಿ ಬ್ರಾ
48 ಹ್ಮಣೇಭ್ಯಃ ಪೊದಲ್ನಾಡ ರಾಷ್ಟ್ರೇ ಕೊಳತ್ತೂರ್ನ್ನಾಮಗ್ರಾಮಃ ದ್ವಾತ್ರಿಂಶತ್ಪರಿಹಾರ ಸ
49 ಮನ್ವಿತ ಮುದಕಪೂರ್ವ್ವನ್ದತ್ತಪೊಲ ಮೇರೆ ಪ್ರಾಚೀದೆಸೆ ಪನೆಡುಙ್ಗುಣ್ಟೆಯಿನ್ಮಡಾ
50 ಯ್‌ಕಡೆ ಆಗ್ನೇಯದೆಸೆ ಪುಲ್ಲಾಯಪೆ ದಕ್ಷಿಣದೆಸೆ ತಳ (?) ಅಣ್ಣ
51 ಯ್ ನ್ಯೆರಿತ್ತೆದೆಸೆ ನೆಲಮುಟ್ಟುಗೂರ್ ಪ್ರತಿಚಿದೆಸೆ ಪೆದ್ದಾಣ ಎವಾ
52 ಯವ್ವಾದೆಸೆ ಪೆಟ್ಟಿಣ್ಣಲಿನ್ನಡಕಾಯ್ಯಕು ಉದಿಚಿದೆಸೆ ಕೆಱೆಯಿನ್ನೀರ್ಗ್ಗೊ
53 ರೆಮುಟ್ಟಿ ಈಶಾನದೆಸೆ ಅರನೆಱು ಒಡಂ ತಸ್ಯ ತಸ್ಯ ದಾನಸ್ಯ ಸಾಕ್ಷಿಣ

(ಐದನೆಯ ಹಲಗೆಯ ಮುಂಭಾಗ)

54 ಗಙ್ಗರಾಕುಲ ಸಮಸ್ತಾ ಸ್ಥಾಯಿಕ ಪುರುಷಾ ಬ್ರಾಹ್ಮಣಾಶ್ಚಯ ಇಮಂ ಗ್ರಾಮಂ ಲೋಭಾತ್ಪ್ರ
55 ಮೊದಾದ್ವಾಪಹಾರೇತ್ಸ ಪಂಚ ಮಹಾಪಾತಕ ಸಂಯುಕ್ತೋಭವತಿ ಅಪಿ ಚಾತ್ರ ಮನುಗೀತಾ
56 ಶ್ಲೋಕಾಭವನ್ತಿ ಸ್ವದತ್ತಾಂ ಪದತ್ತಾ ವಾ ಯೋ ಹರೇತ ವಸುನ್ಧರಾ ಷಷ್ಟಿಂ ವರುಷ ಸಹಸ್ರಾಣಿ
57 ಘೋರೆತ್ಮಸಿ ವರ್ತ್ತತೇ ಬಹುಭಿರ್ವ್ವಸುಧಾದತ್ತೋ ಬಹುಭಿಶ್ಚಾಪಿ ಪಾಲಿತಾ ಯಸ್ಯ ಯ
58 ಸ್ಯ ಯದಾಭೂಮಿ ತಸ್ಯ ತಸ್ಯ ತಥಾ ಫಲಂ ಅದ್ಭಿರ್ದ್ದತ್ತಂ ತ್ರಿ ಭಿರ್ಭುಕ್ತಂ ಷಡ್ಭಿಶ್ಚ
59 ಪರಿಪಾಲಿತಂ ಏತಾನಿ ನ ನಿವರ್ತ್ತನ್ತೇ ಪೂರ್ವ್ವರಾಜ ಕೃತಾನಿಚ ಸ್ವನ್ದಾತು ಸುಮಹಚ್ಛ
60 ಕ್ಯ ದುಃಖ ಮನ್ಯಾರ್ತ್ಥಪಾಲನಂ ದಾನಾ ವ ಪಾಲನಂ ವೇತಿ ದಾನಾಚ್ಛ್ರೇಯೋನುಪಾದನಂ ಬ್ರ
61 ಸ್ವನ್ತು ವಿಷಂ ಘೋರಂ ನವಿಷಂ ವಿಷಮುಚ್ಯತೇ ವಿಷಮಕಾಕಿನಂ ಹನ್ತಿ ಬ್ರಹ್ಮಸ್ವಂ ಪು
62 ತ್ರ ಪೌತ್ರಿಕಂ ಕೊಙ್ಗೊಣಿ ಪೆರುದಟ್ಟಾರೇಣೇದಂ ತಾಮ್ರ ಶಾಸನ ಲಿಖಿತ

## 329

**ಅದೇ ಸಯ್ಯದ್ ಖಾಸಿಂ ಬಿನ್ ಸಯ್ಯದ್ ಜವಾಲ್ ಎಂಬವನ ಬಳಿ ಇರುವ ಇನ್ನೊಂದು ತಾಮ್ರ ಶಾಸನ.**

(5 ಹಲಗೆ, ಅನೆಮೊಹರು, ಉಂಗರ ಸಹಿತ)

ಪ್ರಮಾಣ: ಉದ್ದ $8\frac{1}{4}''$ ಅಗಲ $2\frac{1}{4}''$

(ಒಂದನೆಯ ಹಲಗೆಯ ಹಿಂಭಾಗ)

1 ಸ್ವಸ್ತಿ ಜಿತಂ ಭಗವತಾ ಗತ ಘನ ಗಗನಾಭೇನ ಪದ್ಮನಾಭೇನ ಶ್ರೀ ಮಜ್ಜಾಹ್ನವೇಯ ಕುಲಾಮಲ ವ್ಯೋಮಾವ
2 ಭಾಸನ ಭಾಸ್ಕರಸ್ಯ ಸ್ವಖಡ್ಗೈಕಪ್ರಹಾರ ಖಂಡಿತ ಮಹಾಶಿಲಾಸ್ತಂಭ ಬಲಪರಾಕ್ರಮ ಯಶಸ
3 ದಾರುಣಾರಿಗಣ ವಿದಾರಣ ರಣೋಪಲಬ್ಧವ್ರಣ ವಿಭೂಷಣ ವಿಭೂಷಿತಸ್ಯ ಕಾಣ್ವಾಯನಸ ಗೋತ್ರ

4 ಸ್ಯ ಶ್ರೀಮತ್ಕೊಙ್ಗಣಿವರ್ಮ್ಮಧರ್ಮ್ಮಮಹಾಧಿರಾಜಸ್ಯ ಪುತ್ರಸ್ಯ ಪಿತುರನ್ವಾಗತ ಗುಣಯುಕ್ತಸ್ಯ ವಿದ್ಯಾವಿನಯ
5 ವಿಹಿತವೃತ್ತಸ್ಯ ಸಮ್ಯಕ್ಪ್ರಜಾಪಾಲನ ಮಾತ್ರಾಧಿಗತರಾಜ್ಯ ಪ್ರಯೋಜನಸ್ಯ ನಾನಾಶಾಸ್ತ್ರಾರ್ತ್ಥ ಸದ್ಭಾವಾಧಿ

(ಎರಡನೆಯ ಹಲಗೆಯ ಮುಂಭಾಗ)

6 ಗಮ ಪ್ರಣೀತ ಮತಿ ವಿಶೇಷಸ್ಯ ವಿದ್ವತ್ಕವಿಕಾಞ್ಚನ ನಿಕಷೋಪಲ ಭೂತಸ್ಯ ವಿಶೇಷತೋಪ್ಯನವ ಶೇಷಸ್ಯ ನೀತಿಶಾಸ್ತ್ರ
7 ವಕ್ತೃ ಪ್ರಯೋಕ್ತೃ ಕುಶಲಸ್ಯ ಸುವಿಭಕ್ತ ಭಕ್ತ ಭೃತ್ಯ ಜನಸ್ಯ ದತ್ತಕಸೂತ್ರವೃತ್ತೇಃಪ್ರಣೇತು ಶ್ರೀ ಮಾಧವ ಮಹಾಧಿರಾಜ
8 ಸ್ಯ ಪುತ್ರಸ್ಯ ಪಿತೃ ಪೈತಾಮಹಗುಣಯುಕ್ತಸ್ಯ ಅನೇಕ ಚತುರ್ದ್ದನ್ತ ಯುದ್ಧಾವಾಪ್ತ ಚತುರುದಧಿ ಸಲಿಲಾ
9 ಸ್ವಾದಿತ ಯಶಸ ಸಮದದ್ವಿರದ ತುರುಗಾರೋಹಣಾತಿಶಯೋತ್ಪನ್ನ ತೇಜಸ ಧನುರಭಿಯೋಗ ಸಮ್ಪಾದಿತ ಸ
10 ಮ್ಪದ್ವಿಶೇಷಸ್ಯ ಶ್ರೀಮದ್ಧರಿವರ್ಮ್ಮ ಮಹಾಧಿರಾಜಸ್ಯ ಪುತ್ರಸ್ಯ ಗುರು ಗೋ ಬ್ರಾಹ್ಮಣ ಪೂಜಕಸ್ಯ ನಾರಾಯಣ

(ಎರಡನೆಯ ಹಲಗೆಯ ಹಿಂಭಾಗ)

11 ಚರಣಾನುಧ್ಯಾತಸ್ಯ ಶ್ರೀಮದ್ವಿಷ್ಣುಗೋಪ ಮಹಾಧಿರಾಜಸ್ಯ ಪುತ್ರಸ್ಯ ತ್ರಿಯಮ್ಬಕ ಚರಣಾಮ್ಭೋರುಹ ರಜಃ ಪವಿತ್ರಿ
12 ಕೃತೋತ್ತಮಾಙ್ಗಸ್ಯ ವ್ಯಾಯಾಮೋದ್ವೃತ್ತ ಪೀನಕಠಿನ ಭುಜದ್ವಯಸ್ಯ ಸ್ವಭುಜ ಬಲಪರಾಕ್ಕ್ರಮ ಕ್ಕ್ರಯ ಕ್ಕ್ರೀತ ರಾಜ್ಯಸ್ಯ
13 ಕ್ಷುತ್ಕ್ಷಾಮೋಷ್ಣ ಪಿಶಿತಾಶನ ಪ್ರೀತಿಕರ ನಿಶಿತಧಾರಾಸೇ ಕಲಿಯುಗಬಲ ಪಂಕವಸನ್ನಧರ್ಮ್ಮವೃಷೋದ್ಧರಣ ನಿ
14 ತ್ಯ ಸನ್ನದ್ಧಸ್ಯ ಶ್ರೀಮನ್ಮಾಧವ ಮಹಾಧಿರಾಜಸ್ಯ ಪುತ್ರಸ್ಯಾವಿಚ್ಛಿನ್ನಾಶ್ವ ಮೇಧಾವಭೃಥಾಭಿಷಿಕ್ತ ಶ್ರೀಮತ್ಕದಂಬಕುಲ
15 ಗಗನಗಭಸ್ತಿ ಮಾಲಿನ ಶ್ರೀ ಕೃಷ್ಣವರ್ಮ್ಮ ಮಹಾಧಿರಾಜಸ್ಯ ಪ್ರಿಯಭಾಗಿನೇಯಸ್ಯ ಜನನೀ ದೇವತಾಙ್ಕ ಪರ್ಯ್ಯಂಕ ವಿ

(ಮೂರನೆಯ ಹಲಗೆಯ ಮುಂಭಾಗ)

16 ವಾಧಿಗತ ರಾಜ್ಯಾಭಿಷೇಕಸ್ಯ ವಿಜೃಮ್ಭಮಾಣ ಶಕ್ತಿತ್ರಯಸ್ಯ ಪರಸ್ಪರಾನವಮರ್ದ್ದನೋಪಭುಜ್ಯಮಾನ ತ್ರಿವರ್ಗ್ಗಸಾ
17 ರಸ್ಯ ಅಸಮ್ಭ್ರಮಾವನಮಿತ ಸಮಸ್ತ ಸಾಮನ್ತ ಮಣ್ಡಲಸ್ಯ ನಿರನ್ತರ ಪ್ರೇಮ ಬಹುಮಾನಾನುರಕ್ತ ಪ್ರಕೃತಿವರ್ಗ್ಗಸ್ಯ ವಿ
18 ದ್ಯಾವಿನಯಾತಿಶಯ ಪರಿಪೂತಾನ್ತರಾತ್ಮನಃ ಕಾರ್ತ್ತಯುಗೀನ ರಾಜ ಚರಿತಾವಲಮ್ಬಿನ ಅನೇಕ ಸಮರ ವಿಜಯೋಪಾ
19 ರ್ಜ್ಜಿತ ವಿಪುಲಯಶಃ ಕ್ಷೀರೋದ್ಯೈಕಾರ್ಣ್ಣವೀಕೃತ ಭುವನತ್ರಯಸ್ಯ ನಿರವಗ್ರಹ ಪ್ರದಾನಶೌರ್ಯ್ಯಸ್ಯ ಅವಿಷಹ್ಯ
20 ಪರಾಕ್ಕ್ರಮಾಕ್ಕ್ರಾನ್ತ ಪ್ರತಿರಾಜ ಮಸ್ತಕಾರ್ಪಿತಾ ಪ್ರತಿಹತ ಶಾಸನಸ್ಯ ವಿದ್ವತ್ಸು ಪ್ರಥಮಗಣ್ಯಸ್ಯ ಶ್ರೀಮತ್ಕೊಙ್ಗಣಿ

(ಮೂರನೆಯ ಹಲಗೆಯ ಹಿಂಭಾಗ)

21 ಮಹಾಧಿರಾಜಸ್ಯ ಅವನೀತನಾಮ್ನಃ ಪುತ್ರೇಣ ಪುನ್ನಾಟರಾಜಸ್ಕನ್ದವರ್ಮ್ಮಪ್ರಿಯ ಪುತ್ರಿಕಾ ಜನ್ಮನಾ ಸ್ವಗುರುಗು
22 ಣಾನುಗಾಮಿನಾ ಪಿತ್ರಾ ಪರಸುತಸಮಾವರ್ಜ್ಜಿತಯಾಪಿ ಲಕ್ಷ್ಮ್ಯಾಸ್ವಯಮಭಿಪ್ರತ್ಯಾಲಿಙ್ಗಿತ ವಿಪುಲವಕ್ಷಸ್ಥ
23 ಲೇನ ವಿಜೃಮ್ಭಮಾಣಶಕ್ತಿತ್ರಯೋಪ ನಮಿತ ಸಮಸ್ತ ಸಾಮನ್ತ ಮಣ್ಡಲೇನ ಅನ್ದರ್ಯ್ಯ ಆಲತ್ತೂರ ಹೆರು
24 ಳಿಱೆ ಅಪೆನ್ನ್ರಗರಾದ್ಯನೇಕ ಸಮರ ಮುಖ ಮಖಾಹೂತ ಪ್ರಪಾತಶೂರ ಪುರುಷ ಪಶೂಪಹಾರ ವಿಘಸವಿಹ
25 ಸ್ತೀಕೃತ ಕೃತಾನ್ತಾಗ್ನಿ ಮುಖೇನ ಶಬ್ದಾವತಾರಕಾರೇಣದೇವ ಭಾರತೀ ನಿಬದ್ಧ ವಡ್ಡ ಕಥೇನ ಕಿರಾತಾರ್ಜು ನೀಯೇಪಞ್ಚದಶ

(ನಾಲ್ಕನೆಯ ಹಲಗೆಯ ಮುಂಭಾಗ)

26 ಗ್ಗ ಟೀಕಾಕಾರೇಣ ದುರ್ವ್ವಿನೀತ ನಾಮಧೇಯೇನ ಸಮಸ್ತ ಪಣ್ಣಾಡ ಪುನ್ನಾಡಾಧಿಪತಿನಾ ವೈವಸ್ವತೇನೇವ ಮನುನಾ
27 ವರ್ಣ್ಣಾಶ್ರಮಾಭಿರಕ್ಷಣಾ ದಕ್ಷಿಣಾನ್ದಿಶಮಭಿಗೋಪ್ತುಂ ಪರ್ಯ್ಯಾಪ್ತವತಾಪ್ರಾತಿಜನೀನೇನ ಸುಪ್ರಸಾ ಆತ್ಮನ
28 ಪ್ರವರ್ದ್ಧಮಾನೇ ವಿಂಶತ್ತಮೇ ವಿಜಯ ಸಂವತ್ಸರೇ ಕಾರ್ತಿಕಾ ಮಾಸೇ ಪೌರ್ಣ್ಣಮಾಸ್ಯಾಂ ತಿಥೌ ಕೃತ್ತಿಕಾನಕ್ಷತ್ರೇ
29 ಅಭಿಜಿನ್ಮುಹೂರ್ತ್ತೇ ಭಾರದ್ವಾಜವಾತ್ಸ್ಯ ಕೌಶಿಕೇಭ್ಯಃ ತೈತ್ತಿರ್ಯ್ಯ ಚರಣೇಭ್ಯಃ ಪ್ರಾವಚನಾಪಸ್ತಮ್ಭ ಸೂತ್ರೇಭ್ಯಃ
30 ವಿದ್ವಭ್ಯೋ ಬ್ರಾಹ್ಮಣೇಭ್ಯಃ ಅವಿಚ್ಛಿನ್ನ ಸೋಮಪೀಥೇಭ್ಯಃ ಷಟ್ಕರ್ಮ ನಿರತ ಸಮ್ಪದುಪಪನ್ನೇಭ್ಯಃ ಅಷ್ಟಾ

(ನಾಲ್ಕನೆಯ ಹಲಗೆಯ ಹಿಂಭಾಗ)

31 ಚತ್ವಾರಿಂಶದ್ಬ್ರಾಹ್ಮಣೇಭ್ಯಃ ಪುದಲ್ನಾಡರಾಷ್ಟ್ರೇ ಕೊಳಿಙ್ಗೂರ್ನ್ನಾಮ ಗ್ರಾಮದ್ವಾತ್ರಿಂಶತ್ಪರಿಹಾರ ಸಮನ್ವಿತಮುದ
32 ಕಪೂರ್ವ್ವನ್ದತ್ತಃ ಅಸ್ಯತಟಾಕಸ್ಯ ರೆಡಿಊರ್ನ್ನಾಮಗ್ರಾಮಸ್ಯ ಕೇದಾರೇಷು ಅಪರಿವಾರಿತಂ ಯಾವದುದಕಂ ಗೃಹ್ಣಾ
33 ತಿತಾವದೇವದತ್ತಃ ತಸ್ಯೈತಸ್ಯದಾನಸ್ಯ ಸಾಕ್ಷಿಣಃ ಗಙ್ಗರಾಜಕುಲ ಸಮಸ್ತಾ ಸ್ಥಾಯಿಕಾ ಪುರುಷಾ ಬ್ರಾಹ್ಮ
34 ಣಾಶ್ಚಯ ಇಮಂ ಗ್ರಾಮಂ ಲೋಭಾತ್ಪ್ರಮಾದಾದ್ವಾಪಹರೇನ್ಸಪಞ್ಚ ಮಹಾಪಾತಕಸಂಯುಕ್ತೋ ಭವತೀ ಅಪಿಚಾತ್ರ

35 ಮನುಗೀತಾಶ್ಲೋಕಾ ಭವನ್ತಿ ॥ ಸ್ವದತ್ತಾಂ ಪರದತ್ತಾಂ ವಾಯೋಹರೇತ ವಸುನ್ಧರಾಂ ಷಷ್ಟಿಂವರ್ಷಸಹಸ್ರಾಣಿ
ಘೋರೇತ

(ಐದನೆಯ ಹಲಗೆಯ ಮುಂಭಾಗ)

36 ಸಿವರ್ತ್ತತೇ ॥ ಬಹುಬಿರ್ವ್ವಸುಧಾದತ್ತಾ ಬಹುಭಿಶ್ಚಾಪಿ ಪಾಲಿತಾ ಯಸ್ಯ ಯಸ್ಯ ಯದಾ ಭೂಮಿಸ್ತ್ತಸ್ಯ ತಸ್ಯತ
37 ದಾಫಲಮ್ ॥ ಅದ್ಭಿರ್ದ್ದತ್ತಂ ತ್ರಿಭಿರ್ಭುಕ್ತಂ ಸದ್ಭಿಶ್ಚ ಪರಿಪಾಲಿತಂ ಏತಾನಿ ನ ನಿವರ್ತ್ತನ್ತೇ ಪೂರ್ವ್ವರಾಜ
ಕೃತಾನಿಚ ॥ ಸ್ವನ್ದಾತುಂ
38 ಸುಮಚ್ಛಖ್ಯಂ ದುಃಖಮನ್ಯಾರ್ತ್ಥ ಪಾಲನಂ ದಾನಂ ವಾ ಪಾಲನಂವೇತಿ ದಾನಾಚ್ಛ್ರೇಯೋನುಪಾಲನಮ್ ॥
ಬ್ರಹ್ಮಸ್ವನ್ತು
39 ವಿಷಂ ಘೋರಂ ನ್ನ ವಿಷಂ ವಿಷಮುಚ್ಯತೇ ವಿಷಮೇಕಾಕಿನಂ ಹನ್ತಿ ಬ್ರಹ್ಮಸ್ವಂ ಪುತ್ರಪೌತ್ರಿಕಮ್ ॥ ಕೂನಾಚಾ
ರ್ಯ್ಯಾನ್ವಯೇನ
40 ಕೊಜ್ಗಣಿ ಪೆನ್ದಟ್ಟಾರೇಣೇದಂ ತಾಂಬ್ರ ಶಾಸನಂ ಲಿಖಿತಂ ತಸ್ಮಾಯೇಕ ಖಣ್ಡಿಕಾವಾಪಮಾತ್ರಂ ತತ್ರಕ್ಷೇತ್ರಂನ್ದತ್ತಃ॥

———

# BOWRINGPET TALUK

## ಬೌರಿಂಗ್‌ಪೇಟೆ ತಾಲ್ಲೂಕು

### REVISED INSCRIPTIONS

### ತಿದ್ದುಪಾಡಾದ ಶಾಸನಗಳು

**6 ; 7*a*; 8**

ಬೇತ ಮಂಗಳದ ಹೋಬಳಿ ಬೇತಮಂಗಳದಲ್ಲಿ ವಿಜಯರಂಗಸ್ವಾಮಿ ದೇವಸ್ಥಾನದ ಗೋಡೆಗಳ ಮೇಲೆ.

ಗ್ರಂಥ ಮತ್ತು ಅರವಕ್ಷರ

**86**

ಬೂದಿಕೋಟೆ ಹೋಬಳಿ ಕಸಬಾ ಪಶ್ಚಿಮಬಾಗಿಲಿನ ಹೊರಗಡೆ.

ಪ್ರಮಾಣ 4′ 8″ × 3′

1 ಸ್ವಸ್ತಿ ಸಕಳ ಜಗತ್ರಯ . . . .
2 . . . ನ ಪ್ರತಿಹಾರೀಕೃತ ಮಹಾ . . .
3 . . . ಮರ್ ಬಾಣರಾಸರ್ ಗಜ್ಗನಱು . . .
4 . . . ಳ್ತಿರೆ ರಾಚಮಲ್ಲ ಪೆರ್ಮ್ಮಾನಡಿ . . .
5 ಸದೊಳ್‌ ಕಣ್ಣೆಚ್ಚಿಯಾ ಮೇಗೆ ಪಡೆಗೆಯ್ದು ಕೊಯ್ದಾಳು ಕಾದು . . .
6 ಬಲಮೇಗೆ ಎಟ್ಟಿನ್ದಪು ಅದಱ ಮೇಗೆ ಬಾಣರಾ ಅಸರ್ ತೇಕಲ್ಲ ಟೆ . . .
7 ದೆಯೊನ್ ಆಗ್ಗಳಾ ಅರಸಗಾ ಬೆಸಸಿದೊಡೆ ಬೆಸನ ತೆತ್ತುರ್ಬಿ ಬಲ
8 ಮಾನ್ತಾಳ್ದಿ ಎೞ್ದು ಬಿಟ್ಟೊರ್ದ್ದರ್ ಬಿಯ್ದೊಡೆ ಮೆಚ್ಚಿ ಲಕುನ್ದಮಾ ಬಳ್ಕಚ್ಚು ಕೊಟ್ಟ ಇ
9 ದಾಬ . ವಸ್ಸಂದನ್ ಅವನನುರಚಿದೊನ್ಬೞ್ಚ ಮಾಹಾಪತ
10 ಕ ಅಕ್ಕು ಅರ್ವ್ವೇನಾನು ಅೞಿದೊನ್
11 ಸಸಿರಾ ಕವಿಲೆಯು ಸಸಿ
12 ರ್ವ್ವಪರ್ವ್ವರುಮಾ ಕೊನ್ದ ಲೋಕಕ್ಕೆ ಸ
13 ಲ್ಗ ಬಾರಾಣಸಿ
14 ಯಾ ಅೞಿದೊ
15 ನಾಕ್ಕು ಸ್ವಸ್ತಿ
16 ಶ್ರೀಪುರುಷ
17 ತಾಚ್ಚನ್

### NEW INSCRIPTIONS

### ಹೊಸ ಶಾಸನಗಳು

**90**

ಕಸಬಾ ಹೋಬಳಿ ಜೋಡಿ ಕಾರುಹಳ್ಳಿ ಗ್ರಾಮದಲ್ಲಿ ಕೊಳದಬಳಿ ನೆಟ್ಟಿರುವ ಕಲ್ಲು.

ಪ್ರಮಾಣ 5′ × 2′

(ಮುಂಭಾಗ)

1 ಶುಭಮಸ್ತು
2 ಸ್ವಸ್ತಿ ಶ್ರೀ ಜಯಾಭ್ಯುದಯ ಶಾ
3 ಲಿವಾಹನ ಶಕ ವರುಶ ೧೩೯೦ನೆಯ

4 ಶುಕ್ಲ ಸಂವತ್ಸರದ ವೈಶಾಖ ಶುಧ ೧೫
5 . . . . . ಸೋಲು . . . . .
6 . . . . . . . . . . . .
7 . . . . . . . . . . . .
8 . . . . . . . . . . . .
9 . . . . . . . . ರಕಾಪು
10 ದೇವರಾಜನ . . . . . .
11 . . . . ಚರಿಯ . . . . ನಿಂ . . .
12 . . ಶಾಸನದ ಕ್ರಮವೆಂತೆಂದರೆ ನಂ . . . . ಲ್ಲಿ
13 . . . . ಮುಳವಾಯ ರಾಜ್ಯ . ರಾ . . . .
14 . . . . . . . . . . . . .
15 . . . ಂಗರಾಜ ಒಡೆಯ . . . .
16 . . . ತ್ರಕ . . . ಪುಣ್ಯ

(ಮುಂದೆ ಆರು ಪಙ್ತಿಗಳು ಕಾಣುವುದಿಲ್ಲ)

23 ಸರ್ವಮಾನ್ಯವಾಗಿ ಆ ಚಂದ್ರಾರ್ಕಸ್ತಾ

(ಹಿಂಭಾಗ)

24 ಯಿಯಾಗಿ ಮಕ್ಕಳ . . . . ಯಾಗಿ ದಾ
25 ನಾಥಿಕ್ರಯ . . . . . . ಧಾರೆಯೆ
26 . . . . . . . ಣ . . . . . .
27 . . . . . . . . . . . . .
28 . . . . . . . . ವಾಗಿಸಹ
29 . . . . . . ಸ್ವದತ್ತಾಂ
30 ಪರದತ್ತಾಂ ವಾ ಯೋಹರೇತಿ ವಸುಂಧರಾಂ
31 ಶಷ್ಟಿರ್ವರುಶ ಸಹಸ್ರಾಣಿ ವಿಷ್ಟಾಯಾಂ ಜಾ
32 ಯತಕ್ರಿಮಿ। ಸ್ವದತ್ತಾ ದ್ವಿಗುಣಂ ಪುಣ್ಯಂ
33 ಪರದತ್ತಾನುಪಾಲನಂ। ಪರದತ್ತಾಪಹಾರೇಣ
34 ಸ್ವದತ್ತಂ ನಿಷ್ಫಲಂ ಭವೇತು ಯೀ ಧರ್ಮವ
35 . . . . . . . . . . . . .
36 ನಿ ಸ.ಖದಲೂ ಯಿಪರು ।। ಶ್ರೀ ರಾಮಚಂದ್ರ

## 91

ಅದೇ ಹೋಬಳಿ ಯಲಬುರಿಗೆ ಗ್ರಾಮದ ವೆಂಕಟರಮಣಸ್ವಾಮಿ ದೇವಸ್ಥಾನದಲ್ಲಿರುವ ಘಂಟೆಯ ಮೇಲೆ.

ಕೋಳಾಲ ಶ್ರೀ ವೆಂಕಟೇಶ್ವರ ಸ್ವಾಮಿದಿ ಗಂಟ ಯೆಳುಬರಿಗಿ ದೇವಸ್ತಾನಿಕಿ ಇಚ್ಚಿಂದಿ

## 92

ಅದೇ ಗ್ರಾಮಕ್ಕೆ ವಾಯುವ್ಯದಲ್ಲಿ ನೀರುಗಂಟಿ ಮುನಿಗನ ಗದ್ದೆಯ ಬದುವಿನಲ್ಲಿ ನೆಟ್ಟಿರುವ ಕಲ್ಲು.

ಪ್ರಮಾಣ $1' = 6'' \times 1'$

1 ಎಳುಬರಿಗೆಯ ತ
2 ಮಪ್ಪ ಗೌಶನಿಗೆ ಬಿ
3 ಟ್ಟುಕೊಟ್ಟು ಕೊಡಗೆ
4 ಮಾನ್ಯ ಯಿದಕ್ಕೆ ತಪಿ
5 ದವರು ಗಂಗೆಯ
6 ತಡಿಯಲ್ಲಿ ಗೋವ ಕೊ
7 ಂದ ಪಾಪಕ್ಕೆ ಹೋವ
8 ರು

## 93

ಅದೇ ಯಲಬುರಿಗೆ ಗ್ರಾಮದಿಂದ ಹುನಗುಂದಕ್ಕೆ ಹೋಗುವ ಓಣಿಯಲ್ಲಿ ಬಿದ್ದಿರುವ ಒಂದನೆಯ ಕಲ್ಲು.

(ತುಂಡು ಕಲ್ಲು)

ಪ್ರಮಾಣ $3' \times 1'$

1 ಸ್ತಿ ಶ್ರೀ
2 ಇಚ್ಛ ಮ
3 ಬಣ್ಣಕ
4 . ಂಯ್ಯಗೊ .
5 ವೆಣ್ಡಿಕದಿ
6 ಸತ್ತ ಕಳ್ಗ ಪರಿ
7 ಯೆ ಮರಂಗಲ್ಲೊ
8 ಳ್ ಪನ್ನಿಕ್ಕೊರ್ಕಳಗ
9 ಬ್ಬೆ ಸಲ್ಗ

## 94

ಅದೇ ಸ್ಥಳದಲ್ಲಿ ೨ನೆಯ ವೀರಗಲ್ಲು.

1 ಸ್ವಸ್ತೀ ಶ್ರೀ ಮರಗಲ್ಲ ಜೆಟ್ಟಯ್ಯ ಗಾಮುಣ್ಡ
2 ನ ಮಯ್ದುನ . ಭ್ರುವ ಹೊನ್ನಿಗ ಪಸುಗ
3 ಪ್ರೊನ್ನವೆ
4 ಣ್ಡಿ ತಮ್ಮ
5 ಚವನಮ
6 ಊರಟಿವಿ
7 ನೊ ಸತ್ತ ತ
8 ಮ್ಮಾ ಬಾವ
9 ಗೆ ಸೆಬ
10 ಟಿ ಸಲಿ
11 ಸಿಪ ಗ
12 ಮಾತು

## 95

ಅದೇ ಸ್ಥಳದಲ್ಲಿ ೩ನೆಯ ವೀರಗಲ್ಲು.

ಪ್ರಮಾಣ $4' \times 4'$

1 ಸ್ವಸ್ತಿ ಶ್ರೀ ಮರಗಲ್ಲ ಗಾಮುಣ್ಡನ
2 ಮಯ್ದುನ ಸೆಲಪಿ
3 ಮಾರಯ್ಯ
4 ಎಲಬರಸಿ
5 ರಿ ವೆಣ್ಡಿ ಮ
6 ರಗಲ್ಲ ಊ
7 ರಟಿವಿನೊ
8 ಳ್ಕಾದಿ ಸತ್ತ
9 ಬವನ ಬ
10 ಲಗೆ

## 96

ಅದೇ ಸ್ಥಳದಲ್ಲಿ ೪ನೆಯ ವೀರಗಲ್ಲು.

1 ಸ್ವಸ್ತಿ ಶ್ರೀ ಮರಗಲ್ಲ ದೇವು
2 ಲವೆಡಯ ಚಾಮಯ್ಯ

3 ಗಮುಣ್ಡ
4 ಕಾದಿ ಸ
5 ತ್ತ ಪನ್ನಿ

## 97

ಅದೇ ದಾರಿಯಲ್ಲಿ ಎಡಗಡೆ ನೆಟ್ಟಿರುವ ಕಲ್ಲು.

ಪ್ರಮಾಣ $3'=6''\times 3'$

ಗ್ರಂಥ ಮತ್ತು ಅರವಕ್ಷರ

## 98

ಅದೇ ಹೋಬಳಿ ನೆರನಹಳ್ಳಿ ಗ್ರಾಮದಲ್ಲಿ ಗೋವಿಂದಪ್ಪನ ಕಟ್ಟುಕೊಡಿಗೆ ಗದ್ದೆಯಲ್ಲಿ ನೆಟ್ಟ ಕಲ್ಲು.

ಪ್ರಮಾಣ $3'\times 1'=3''$

(ಮುಂಭಾಗ)

1 ದುರ್ಮತಿ ಸಂವತ್ಸರಂ
2 ಭಾದ್ರಪದ ಬ ೩ ಲು ಹ
3 ಂಪಯ್ಯನವರು ಕೊ
4 ಪಯ . ಸರು . .
5 ಸಿ ಬಿಟಕಲು
6 . . . . . . .
7 ಯೆರಡನೆ ಸ್ತಳದ
8 ಲಿ . . . ಯಿದ
9 ಕೆ ಆರು ತಪಿದ

(ಹಿಂಭಾಗ)

10 ವರು ಗಂಗೆ ತ
11 ಡಿಯಲ ಕಪಿಲೆ
12 ಯು ಕೊಂದ ಪಾ
13 ಪಕ್ಕೆ ಹೋಗುವ
14 ರೂ . . . .
15 . . . . . . .
16 . . . . . . .

## 99

ಅದೇ ಗ್ರಾಮದಲ್ಲಿ ಪಟೇಲ್ ಬೈರೇಗೌಡನ ಹೊಲದ ಬದುವಿನಲ್ಲಿ.

ಪ್ರಮಾಣ $5'\times 2'$

ಗ್ರಂಥ ಮತ್ತು ಅರವಕ್ಷರ

## 100

ದಾಸರಹಳ್ಳಿ ಹೋಬಳಿ ಗಟ್ಟುಕಾಮದೇನಹಳ್ಳಿಯ ಈಶ್ವರ ದೇವಸ್ಥಾನದ ದಕ್ಷಿಣ ತಳಪಾದಿಕಲ್ಲಿನಮೇಲೆ.

(ದಕ್ಷಿಣ ದಿಕ್ಕು)

1 ಸ್ವಸ್ತಿ ಶ್ರೀ ವಮ್ಮಗಚಟಿಸೆಟ್ಟಿ ದೇಗುಲವ ಮಡಿಸಿ ಲಿಂಗಪ್ರತಿಷ್ಟೆಗೆಯ್ಸಿ ಇ ದೇಗುಲವಮ್ಮಡಿದ ನೊಬಿಮ್ಬಾ

(ಪೂರ್ವ ದಿಕ್ಕು)

2 ಚಾರಿಗೆ ಕಣ್ಡುಗ ಗಟ್ದೆ ಧಾರೆಯೆಱೆದು ಕೊಟ್ಟ ಇದನಱಿದನ್ ಇ ಲಿಂಗವನಟಿದ ಪತನಕ್ಕು

## 101

ಅದೇ ದೇವಸ್ಥಾನದ ಪೂರ್ವದಿಕ್ಕಿನ ತಳಪಾದಿಕಲ್ಲಿನಮೇಲೆ.

1 ಸ್ವಸ್ತಿ ಶ್ರೀ ವಮ್ಮಗಚಜಿಸೆಟ್ಟಿ ದೇಗುಲವ ಮಡಿಸಿ ಲಿಂಗಪ್ರತಿಷ್ಠೆ
2 ಗೆಯ್ಸಿ ದೇವರ್ಗ್ಗೆ ಕೊಟ್ಟ ಗಬ್ಬೆ ಮೂಗಣಿಂಗ ಪಾಟಿ ಕಣ್ಡಿಗ ಇಸ್ಥವದರೆ ಎಸೆದು ಕೊಟ್ಟ

## 102

ಅದೇ ದೇವಸ್ಥಾನದ ಪೂರ್ವ ತಳಪಾದಿಕಲ್ಲಿನಮೇಲೆ ಬಾಗಿಲಿಂದ ಉತ್ತರಕ್ಕೆ.

1 ತಿರು ಪೆರಿಭಟ್ಟರ್ಗ್ಗೆ ಸೆಟ್ಟಿ ಕೊಟ್ಟ ಸರ್ಬ್ಬಾಪದ ಪರಿಹಾರ
2 ಇದನಟಿದವ ಬರನಸಿಯು ವಾಟಿ ಕವಿಲೆಯುವನದ ಪತನ
3 ಕ್ಕು

## 103—104

ಅದೇ ಗ್ರಾಮದಲ್ಲಿ ಈಶ್ವರ ದೇವಾಲಯದ ದಕ್ಷಿಣ ತಳಪಾದಿಕಲ್ಲಿನಮೇಲೆ ಬಂದೇಶ್ವರಮ್ಮನ ಗುಡಿಯ ಎದುರಿಗೆ ಕಂಬದ ಮೇಲೂ ಇರುವ ಶಾಸನಗಳು.

ಗ್ರಂಥ ಮತ್ತು ಅರವಕ್ಷರ

## 105

ಬೇತಮಂಗಲ ಹೋಬಳಿ ಬೇತಮಂಗಲದ ವಿಜಯರಂಗಸ್ವಾಮಿ ದೇವಸ್ಥಾನದ ಮುಂದೆ ಎಡಗಡೆ ನೆಟ್ಟ ಕಲ್ಲು.

1 . . . . . . ಗನ . . . . . ಲುಕುಜ್ಜಿಕೆ
2 . ಬರಾ . . . . . ತಂಮ ತಂದೆಗೆ ಪರ . .
3 . . . . ತಂಮ ತಾ . . . . ಕೆಂತ . .
4 . . . . . . . ಬೇಕೆಂದು ಯೀತ .
5 . . . . . . . ಪುಂಣ್ಯಕಾಲದಲೂ ತ
6 . . . . . . ದೇವರ ಸಂನಿಧಿಯ
7 . . . . . ಪೂರ್ವ . . . .
8 . . . . . . . . . . ನಕ್ಕು

## 106

ಅದೇ ಗ್ರಾಮದಲ್ಲಿ ಅರ್ಕೇಶ್ವರ ದೇವಾಲಯದ ಮುಂದೆ ದೀಪಸ್ತಂಭದ ಹತ್ತಿರ ಇರುವ ತುಂಡು ಕಲ್ಲು.

ಗ್ರಂಥ ಮತ್ತು ಅರವಕ್ಷರ

## 107

ಅದೇ ದೇವಸ್ಥಾನದ ಮುಂದೆ ಬಿದ್ದಿರುವ ಕಲ್ಲು.

(ಮೇಲ್ಭಾಗ ಹೋಗಿದೆ)

1 ೧೪೪೪ನೆಯ ಚಿತ್ರಭಾನು . . . .
2 ಶ್ರಾವಣ ಶು ೧೦ . . . . .
3 ಜರಾಜರಾ . . . ಶ್ರೀ ಕ್ರಿ .

## 108—109

ಅದೇ ಗ್ರಾಮದಲ್ಲಿ ಗಂಗಮ್ಮನ ಗುಡಿಯ ವಾಯವ್ಯದಲ್ಲಿ.

ಗ್ರಂಥ ಮತ್ತು ಅರವಕ್ಷರ

## 110

ಅದೇ ಗ್ರಾಮದಲ್ಲಿ ಗೋಸನಕೆರೆಯ ಉತ್ತರ ಕೋಡಿಗೆ ಪೂರ್ವಭಾಗದಲ್ಲಿರುವ ಹುಟ್ಟು ಬಂಡೆಯ ಮೇಲೆ.

1 . . . . . . . . ರ . . . .
2 . . . . . . . . . . . . .
3 ಜಥುರ . . . ನಾಮ
4 ಸಂ|| ಚೈತ್ರ ಶು ೫
5 ಕರವು . . . ಕು ತುಂ
6 . . . ಕೊಟ ಹೊಲ

## 111

ಅದೇ ಹೋಬಳಿ ಕೊಟ್ಟಿಲ ಬಂಡೆಯಲ್ಲಿ ಈಶ್ವರ ದೇವಾಲಯದ ಉತ್ತರಕ್ಕೆ.

ಗ್ರಂಥ ಮತ್ತು ಅರವಕ್ಷರ

## 112

ಬೂದಿಕೋಟೆ ಹೋಬಳಿ ಕಸಬಾ ಬೂದಿಕೋಟೆ ಗ್ರಾಮಕ್ಕೆ ಪಶ್ಚಿಮ ಸೋಮೇಶ್ವರ ದೇವಸ್ಥಾನದ ತಳಪಾದಿಕಲ್ಲಿನಮೇಲೆ.

1 ಸಕಾಬ್ದ ೪೪೮೨ . ೦ನಡವ ಸರ್ವಜಿತು ಸಂವತ್ಸರದ ಪುಷ್ಯ ಸು ೧೨ಲೂ ಶ್ರೀ ಮಂಮಹಾಮಂಡಳೇಶ್ವರ . . . . . . . . . . ಯೀ ದೇವಸ್ತಾನಕ್ಕೆ ನಡ . ಹೊಲ ಗೆದ್ದೆಗೆ ಕಜು . . ಭೂ ಕಾಣಿಯನು ದೇವರಿಗೆ ಬಿಟ ಸಾಧನ ಯಿದಕ್ಕೆ ಆರೊಬರು ತಪ್ಪಿ ಬಂದ . . . . ಳ . . . ಯಲಿ ಬ್ರಾಹ್ಮರ ಕೊಂದ ಪಾಪ ಕಂದಳು ಕಪಿಲೆಯ ಕೊಂದ ಪಾಪದಲಿ ಹೋಹರು ಯಿದ ನಡಸಿದವರು . . . ಯನಪಲಪದಾಯಕ ಅಂದಂದಿಗೆ ಆ
2 ಮಲ್ಲಿಕಾರ್ಜುನರಾಯನಿಗೆ ಧರ್ಮ

## 113

ಅದೇ ಹೋಬಳಿ ಕಾರಮಾನಹಳ್ಳಿ ಗ್ರಾಮದ ತಿಮ್ಮರಾಯಸ್ವಾಮಿ ದೇವಸ್ಥಾನದ ಪಕ್ಕದಲ್ಲಿ ದೊಡ್ಡ ಹಾಸುಗಲ್ಲಿನ ಮೇಲೆ.

ಪ್ರಮಾಣ 6′×6′

1 ಚಿತ್ರಭಾನು ಸಂವತ್ಸರದ ಕಾರ್ತಿಕ ಸು ೩ ಗುರು
2 ವಾರದಲು ಸ್ವಸ್ತಿ ಶ್ರೀಮತು ಶ್ರೀವೀರ ಬೊ
3 ೦ಮಣ ಪೊಡೆಯರ ಕಾಲದಲು . ತೇಕಲ
4 ನಾಡಕಾ . . . . . .
5 ಮ . . . . . . . . ಗಲು
6 ಡು ಪ್ರಭುಗಳುಂ ವಿದೇಸ್ವರ ದೇವ ಕೋವಿಲ
7 ನು ಚಿನಂದಾಂವಿಗೆ ಕೊಟ ಸವತದ
8 . . . ವಂದಿಸಿ . . . . ಲ . . .
9 . . . ವರ . . . . ಶ್ರೀ . . . ದಲು
10 . . . . . . . . . . . .
11 . . . . . . . ಗನ . . . .

———

# MALUR TALUK

## ಮಾಲೂರು ತಾಲ್ಲೂಕು

### Revised Inscriptions

### ತಿದ್ದುಪಾಡಾದ ಶಾಸನಗಳು

### 3

ತೇಕಲ್ಲು ಹೋಬಳಿ ತೇಕಲ್ಲು ಗ್ರಾಮದ ವರದರಾಜಸ್ವಾಮಿಯ ದೇವಸ್ಥಾನದ ಗೋಪುರದ ಬಾಗಿಲ ಬಳಿ ಉತ್ತರ ಕಡೆಯಲ್ಲಿ.

1 ಸ್ವಸ್ತಿ ಶ್ರೀವಿಜಯಾಭ್ಯುದಯ ಶಕ ವರುಷ ೧೩೫೭ನೆ
2 ಯ ಸಾಧಾರಣ ಸಂವತ್ಸರದ ಮಾಘ ಶು ೧೦ ಗು ಶ್ರೀಮನ್ಮಹಾಮಂಡಳೇಶ್ವರ
3 ಮೇದಿನೀಮೀಸಿರಗಂಡ ಕಠಾರಿಸಾಳುವ ತ್ರಿಭುವನೀರಾಯ ಗಂಡರಗೂಳಿ ಸಂಬರಾಯಸ್ಥಾ
4 ಪನಾಚಾರ್ಯ ದಕ್ಷಿಣಸುರತ್ರಾಣ ವಿಭಾಡರಾಯ ಪಕ್ಷಿನಾಳುವ ಸಾಳುವ ತಿಪ್ಪರಾಜವೊ
5 ಡರ ಕುಮಾರ ಗೋಪರಾಜ ವೊಡರ ಪ್ರಧಾನ ಮಲ್ಲಮರಾಜನ ಮಗ ಸಿಂಗರಾಜನು ಪೊಲ
6 ನಾಡ ಮಾದನಹಳಿಯ ಪಡುವಣ ಮೂರಗಲುಡನ ಕಟ್ಟೀ ಮೇಲಣ ಗಂಡಭೇರುಂಡನೆಂ
7 ಬ ಮಾವಿನ ಮರನನೂ ಪೊನ್ನಾಡ ಮಾದನಹಳಿಗೆ ಅಡಬರುವ ಕಯ್ಯಾಲು ಕಟ್ಟಿಕೆ ಕಲ್ಲವರ
8 ದರಾಜದೇವರ ಮುಖ ಮಂಟ್ಟಪದ ಗೋಪುರದ ಕದವಿಗೆ ತರ್ರಿ ಆ ತೇಕಲ್ಲ ಬಡಗಿ ಬೇವೋಜನ ಮ
9 ಗ ಚೋಜದೇವೋಜಗಳ ಕಯ್ಯಲೂ ಮರಗೆಲ್ಸವನೂ ಮಾಡಿಸಿ ಕಂಮೂಱ ಅಂಜಲಲಿಂಗೋಜಗಳ ಕಯ್ಯಲು
10 ಕದವಿಗೆ ಕಬುನದ ಕೆಲ್ಸಗಳನು ಮಾಡ್ಸಿ ಆ ವೋಜಗಳಿಗೆ ಕುದುರೆ ಸತ್ತಿಗೆಗಳನು ಕೊಟ್ಟು ಕಾಣಿ ಭೂಮಿ
11 ಯಾಗಿ ಚೋಜದೇವೋಜಗಳಿಗೆ ಗೋಪರಾಜನ ಪೊನಾಡ ಮಾದನ ಹಳಿಯಲೂ ಕೊಟ್ಟದು ಗದ್ದೆ ಖಂ॥ ಹೊ
12 ಲ ಖಂ॥ ಈ ದೇವಸ್ತಾನದಲೂ ವರುಷ ೧ ಕಂ ಗ' ೩ ಅವರಿಗೆ ಸಂದುಬಹುದು ಆ ಕಬುನ ಕೆಲಸಿ ಅ
13 ಂಜಲವಿರುವೋಜಗಳಿಗೆ ಸ್ತಾನದಲು ಸಿವದಿಹಳಲೂ ಗದೆ ಖ ೧॥ ಎ ಕಾಣಿಯಾಗಿ ಸಂದು ಬಹ . . .
14 ಂಲಿಂಗೋಜಗೆ ಗೋಪರಾಜನು ದಾರೆನೆರೆದು ಕೊಟ್ಟ ಸೆಟ್ಟಿಯಹಳಿಯಲೂ ಗದ್ದೆ ಖಂ॥ . . . .
15 . . . . ಭಯಂ ಗದೆ ಹೊಲನು ಖಂ॥ ಇಷ್ಟು ಸಂದು ಬಹುದು ಇಷ್ಟ
16 . . . . ಕಳನೂ . . . . . . . ಯಲುವಂ . . . ಕೊಡುವ ವರದರಾಜ ದೆ
17 ವರ ತೇಕಲ ಪಟ್ಟಣಕೆ ಬಿಜಯಂ ಮಾಡ್ಸಿಕೊಂಡು ಹಿರಿಯಚೊಕ್ಕ ಪೆರುಮಾಳದಾಸರ ಅಳಿಯ
18 ಹರಿದೇವರ ಮಗ ಚೊಕ್ಕ ಪೆರುಮಾಳೆದಾಸರ ಆಳಿಯ ನಾಯನಾರು ದಾಸರು ಯೀ ದೇವರಿಗೆ ಪೂಜೆ ಪು .
19 ಸ್ಕಾರ ಮಾಡುವ ತಿಗುಳ ಬ್ರಾಹ್ಮರು ವರದರಾಜ ಭಟ್ಟರು ದೇವರಾಜ ಭಟ್ಟರು ಶಾಮಂಣನಂ ವ
20 ರದರಾಜ ಭಟ್ಟರು ಪರಿಚಾರಕ ರಾಮರು ದೇವರಿಗೆ ಬೊನವ ಮಾಡುವ ಆಳಗಿ ವರದರು ದೇವರ
21 ನಾಮ ಸರಣೆಯ ಮಾಡುವ ಶ್ರೀ ವೈಷ್ಣವರು ಆಯಿಪಿಳೆ ಬಂನ್ನೂರ ಘಟ್ಟದ ಬಳಿ ತಿರುವೆಂ
22 ಗಡಪಿಳೆ ಬಂಜಣದಾಸ ಪಿಳೆ ದೇವರಿಗೆ ಹೂವಿನ ದಂಡೆಯ ಕಟ್ಟುವ ದಾಸುಗಳು ತಿರುವೆಂ
23 ಗಳ ದಾಸನು ಹಿರಿಯದಾಸನು . . . . ದನು ದೇವಂಣನ ವಿನವರದಂಣನು
24 ಮಾದವದಾಸನುಂ . . . . . . . . . . . . . . . . ಭಟ್ಟ ವಲ್ಲಭಯ್ಯನ ಮಕ್ಕಳು ಭಟ್ಟರಯೆ
25 ಹಲಖುಮಣಯ್ಯ . . . . . . . . . . . . . . ರಂಗನಾಥನ ಮಕಳು ವರದಂಣ ವಲ್ಲಭನು ಅಪರಾ
26 ಜನ ಮಗ . . . . . . . . . . . . . . ಪನ ಮಗ ರಾಯಂಣ ಯೀಸ್ತಾನದ ಅಂಗ ರಂಗ ಭೋ
27 ಗಕೆ ನಟ್ಟುವ . . . ಯನಾ . . . . . . . . ದಕೆ ಕಾಳೆ ವರದನ ಮಗ ಚೊಕನು ಆ ತಂಮ ಆ ನಟನು ಕಾ
28 ಳಗೆ ದಾಸನು ಸಂಖಗೆ ಶ್ರೀರಂಗನು ಉಪಾಂಗಕ್ಕೆ ವರದನು ಹಾಡುತಿವರದಿಕಾ
29 ವರದನ ಮಗಳು ಅಲ್ಲೆನಾಚಿ ಆರಂಗಿದೇವಿ ನಟುವ ನಾಯಿನಾರು ಮಗಳು ಚಿಕನಾಚಿ
30 ನಾಪರಾಜವೊಡೆಯರು ದೇವರಿಗೆ ಸೆಟಿಯ ಹಳಿಯನೂ ಧಾರೆನೆಱದು ಕೊಡುವಲ್ಲಿ ಕ್ರ
31 ಯ ಮೂಲ್ಯ ಪಾ . . . ವಾಗಿ ಅಂಕುವ ಮಗಳು ಸಿರಿಗೆಯ ಮಗಳು ಗಂಗಾಯಿ ಆಳುವಿಗಳ

32 ಗ ಆ ಸೆಟೆಹ . . . ಲು ಕಾಲೆಭೂಮಿಯನೂ ವಿಂಗಡಿಸಿ ಸಂದು ಬಹುದು ಗದೆ ಖ ೧ ಹೊ
33 ಲ ಖ ೧ ಯಿಷ್ಟನೂ ಕೊಟ್ಟು ಆ ದೇವರಿಗೆ ನಿಲಿಸಿದ ಪಾತಗಂಗಾಯ ಆಳುವಿ ಪೂರ್ವದ ಪಾತ್ರ ಚೆಂ
34 ನಿಯ ಮಗಳು ವರದಿ ಹಿರಿಯವರದಿ ನಿಟ್ಟೆಯವರದಿ ಸಿಂಗಿಯ ಮಗಳು ಬಡನಾಚಿ ಚಿ
35 ಕ ಆಳುವಿಯ ಮಗಳು ಕಸ್ತೂರಿ ವರದಿ । ಚಿಕವರದಿ ಕಾಳೆವರದನ ಮ.ಗಳು ಸಂಪೆಂಗಿವ
36 ರದಿ ಹಿರಿಯ ಆಲವಿಯ ಮಗಳು ನಾಚಿ।ಶ್ರೀರಂಗಿಯ ಮಗಳು ನಾಚಿ। ನಟುವರದಿ
37 ಮಗಳು ಚಿಂಖಣ ಲಚಿ। ತಿಪಿ। ತರೌಡೆ।ಆ ನಂಜಿದೇವಿಯ ಮಗಳು ತಿಪ್ಪಿ।ಮೂರಾ
38 ತೆ।ದೇವ ಅಂಗರಂಗಮಂಟಪಲೂ ಸಾರುಸುವ ಊಳಿಗದ ತಿಂಮಿ। ಯೀ ಅಂಗ
39 ರಂಗದ ಊಳಿಗದವರಿಗೆ ಕೊಣ್ಡ ಭೂಮಿಯಾಗಿ ಸಲುವ ಊರುಗಳು।ತೇಕಲ್ಲ
40 ನಾಡ।ಆಳಂಬಾಳು।ಕೆಂಮೊಳೆ। . ವತಿಹಳಿ।ವಿರಂಗ ಪುತ್ತೂರು।ಹುಣಿಸೆ
41 ಕೊಪ್ಪ। ಅಂಣಂದನಹಳಿ।ಅಂತ್ರೂ ಗ್ರಾಮ . ಯ ಅಚಿನೂ
42 ದೇವರ . . . ಗದೆ ಊಳಿಗ ಕೊಂಡು ಬಹುದು ದೇವರ . . . . . ಕ
43 ಸ್ತೂರಿಸುಗಂಧ ಪರಿಮಳ . . . ಗಳಿಗೆ ಉ ವಸ್ತ್ರಕಪರಗಳಿಗೆ . . . .
44 ಚತುಸಮುದ್ರಾಧಿಪತಿಗಳು ಹಿರಿಯ ಹರಿಯಪ ವೊಡೆಯ . . . . .
45 ಕರಾಯರು ಹರಿಯಪ ವೊಡೆಯರು ದೇವರಾಯರು . . . . . .
46 ರಾಯ ಮಹಾರಾಯರು . . . . . . .
47 . . . . . . . . .
48 ಹ . . . ಗ್ರಾಮ . . . . ,
49 ರಾಜ್ಯ . . . . . .
50 ಯಿವರ . . .
51 ತೇಕಲು ನಾಡ . . . . . . ಟ್ಟ . . . . ,
52 . . . . . ಹಯಾಸ್ತಾನಕೆ ಉರುಗಳಿಗೆ . . . .
53 . . . . . . . . .

## 6 ; 6a ; 9 ; 18 ; 19 ; 21 ; 23-25

ತೇಕಲ್ಲು ಹೋಬಳಿ ಕಸಬಾ ಸೋಮೇಶ್ವರ ದೇವಸ್ಥಾನದಲ್ಲಿ ಮತ್ತು ಅಮ್ಮನಗುಡಿ ಭಿತ್ತಿಯಲ್ಲಿ.

ಗ್ರಂಥ ಮತ್ತು ಅರವಕ್ಷರ

## 32

ಅದೇ ಗ್ರಾಮಕ್ಕೆ ಉತ್ತರ ಹಾಳುಬಿದ್ದಿರುವ ಕಾಳಿಕಾದೇವಸ್ಥಾನದ ಪಶ್ಚಿಮ ಗೋಡೆಯಲ್ಲಿ.

1 ಶುಭಮಸ್ತು ಸ್ವಸ್ತಿ ಶ್ರೀ ವಿಜಯಾದ್ಭುದಯ ಶಾಲಿವಾಹನ ಶಕ ವರುಷ ೧೪೬೮ನೆಯ ಶುಭಕ್ರುತು ಸಂವತ್ಸರದ ಆಪಾಡ ಶು ೧೨ ಲು ಶ್ರೀ
2 ಮನ್ಮಹಾಜಾರಾಧಿರಾಜ ರಾಜಪರಮೇಶ್ವರ ಪೂರ್ವದಕ್ಷಿಣ ಪಶ್ಚಿಮ ಸಮುದ್ರಾಧೀಶ್ವರ ಶ್ರೀ ವೀರಪ್ರತಾಪ ಶ್ರೀ ವೀರ ಅಚುತರಾಯ ಮಹಾರಾಯರೂ ಪ್ರುಥ್ವೀರಾಜ್ಯಗ್ಯೆಉತಂಯಿರಲು
3 ಪರೆಯದರಾಮನಾಯಕರ ಮ:ಗ ಯೆಚಿಪನಾಯಕರು ತೇಕಲ ಸೋಮಯ ದೇವರ ರಾಮಯಲಿಂಗ ದೇವರ ಸ್ತಾನೀಕ ನಯಿನಾರ್ಯೆಯಗೆ ಕೊಟ ದರ್ಮ ಶಾಸನ ಕ್ರಮವೆಂತೆಂದರೆ ಹದಿನೆಂಟು ನಾ
4 ಡೊಳಗಣ ತೇಕಲ ಸೀಮೆಗೆ ಸಲುವ ಹುಳದೇವನ ಹಳಿ ಗ್ರಾಮಧಿಪತಿ ಪರೆಯದ ರಾಮೆಯನಾಯಕರ ಮಗ ಯಚಿಪನಾಯಕರು ತೇಕಲ ಸೋಮಯ ದೇವರಿಗೂ ರಾಮಯಲಿಂಗದೇವರಿಗು
5 ಅಮ್ರುತಪಡಿ ನೈವೇದ್ಯಕೆ ಷಡಮಹದರೆಹಂ ಪುಂಣ್ಯ ಕಾಲದಲು ಅಚುತರಾಜದೇವ ಮಹಾಅರಸುಗಳ ಧಂರ್ಮವಾಗಿ ಸಹಿರಣ್ಯೋದಕ . . . . . ಕವಾಗಿ . ಆ ಹುಳದೇವನಹಳಿ
6 ಸ್ಥಳಕೆ ಸಲುವ ಗ್ರುಹಾರಾಮ ಕ್ಷೇತ್ರವಾಪೀಕೂಪತಟಾಕ . . . ಅಕ್ಷೀಣಿ ಆಗಾಮಿ ಜಲಪಾಷಾಣ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜ ಸ್ವಾಂಮ್ಯವನೂ ಸೋಮೆಯದೇವರಿಗೆ ರಾಮಯ
7 ಲಿಂಗದೇವರಿಗೆ ಅಮ್ರುತಪಡಿ ನೈವೇದ್ಯ ಪೂ . ಂಗಳೂ ಪರೆದರಾಮೆಯನಾಯಕರ ಮ.ಕಳು ಯಚಿಪನಾಯಕರು . . . . . ನವರು ಕೊಟೆವಾಗಿ ಆ . . . .
8 ಚಂದ್ರಾರ್ಕಸ್ಥಾಯಿಯಾಗಿ . . . ಕೊಟ ಶಿಲಾಶಾಸೆನ ದಾನಪಾಲನಯೋರ್ಮಧ್ಯೇದಾನಾಛ್ರೇಯೋನು ಪಾಲನಂ ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚುತಂ ಪದಂ

## 35

ಅದೇ ಹೋಬಳಿ ಉಳ್ಳೇರಹಳ್ಳಿಗ್ರಾಮಕ್ಕೆ ಪಶ್ಚಿಮ ಪಾಳು ವರದರಾಜ ದೇವಸ್ಥಾನದ ಮುಂದೆ ಹುಣಿಸೇಮರದ ಕೆಳಗಿನ ಬಂಡೆಯಮೇಲೆ.

1 ಸ್ವಸ್ತಿ ಶ್ರೀ ವಿಜಯಾದ್ಭುದಯ ಸಾಲವಾಹನ ಸಕ ವರುಷ
2 ೧೪೫೭ ಪಾರ್ತಿವ ಸಂವತ್ಸರದ ಕಾರ್ತಿಕ ಶು ೫ ಯಲು ಶ್ರೀ
3 ವಿಷ್ಠಲರಾಹುತರು ತಮಗೆ ಕ್ರುಷ್ಣರಾಯ ಮಹಾರಾಯರು ನಮ
4 ನಾಯಕತನಕ್ಕೆ ಪಾಲಿಸಿದ ತೆಕಲ ಸೀಮೆವೊಳಗಣ ಉಳೆಯರ ಹಳಿ
5 ಕೋಳಾಲದ ತಂಬಿಗೆ ಸರ್ವಮಾನ್ಯದ ಭಟ ವ್ರಿತಿಯಾಗಿ ಕೊಟ್ಟೆವು
6 ಯಿದಕೆ ತಪಿದವನ ಹೆಂಡತಿಯ ಕೆದಾತ . . . .
7 ಯಿದು

## 41

ಅದೇ ಹೋಬಳಿ ಹಳೇಪಾಳ್ಯಕ್ಕೆ ಪೂರ್ವ ರಾಜಾಭಾವಿ ಬಂಡೆಯ ಮೇಲೆ.

1 ಶ್ವಸ್ತಿ ಶ್ರೀ ಜಯಾಭ್ಯುದಯ ಸಾಲವಾಹನ ಸಕ ವರುಷ ೧೫೦೦ ನೆಯ
2 ಬಹುಧಾನ್ಯ ಸಂವತ್ಸರದ ಕಾರ್ತಿಕ ಶು ೧೫ ಲು ಶ್ರೀಮನ್ ಮಹಾ
3 ಮಂಡಲೇಶ್ವರ ಸಲಕರಾಜ ಚಿಕತಿರುಮಲರಾಜಯ್ಯನವರ ಕೊ
4 ಮಾರ ರಂಗರಾಜಯ್ಯನವರ ಕೋನೇರಿ ಗುತ್ತಿನಾರಸಿಪ್ಪ

## 42

ಇದರ ಪೂರ್ವಕ್ಕೆ ಅದೇ ಬಂಡೆಯು ಮೇಲೆ.

1 ಯಿರುಗಂಣ್ಣ ಒಡೆಯ'ರ ಭಾವಿ
2 ಕೀಲಕ ಸಂವತ್ಸರದ
3 ಆಶ್ವಇಜ ಸು ೫ ಸೊಮರ

## 49

ಹುಳದೇನಹಳ್ಳಿ ಹೋಬಳಿ ಹುಳದೇನಹಳ್ಳಿಯ ಕೊಡಗೀ ಕೆರೆಯ ಏರಿಯ ಮೇಲೆ.

ಗ್ರಂಥ ಮತ್ತು ಅರವಕ್ಷರ

## 80

ಮಾಲೂರು ಹೋಬಳಿ ಮಾಲೂರು ಕೆರೆ ದಕ್ಷಿಣ ಕೋಡಿಯ ಸಮೀಪದಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ $3' = 6'' \times 3' = 3''$

1 ಗಣಾಧಿಪತಯೇ ನಮಃ
2 ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ ತ್ರೈಳೊ
3 ಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ। ಸ್ವಸ್ತಿ ಶ್ರೀ ವಿಜಯಾಭ್ಯುದಯ
4 ಶಾಲಿವಾಹನ ಸಕ ವರ್ಷಂಬುಲು ೧೬೪೫ ಟಿ ಚಿಶ್ರಭಾನು ಸಂವತ್ಸರೆ
5 ವುತ್ತರಾಯಣ ವಸಂತುರುತೌ ಚೈತ್ರಮಾಸ ಕೃಷ್ಣಪಕ್ಷೆ ೨ ಬುಧವಾರಮು
6 . . ಯಣ ಮಹಾಪುಂಣ್ಯಕಾಲದಲು ಬಾರದ್ವಾಜಿ ಗೊತ್ರ ಮಕುಲಾ
7 ಬ್ದಿಚೆಂದ್ರುರಾದ . . . ಪೌತ್ರರಾದ ರಾಮಚಂದ್ರರಾ. ವರ ಪುತ್ರರಾದ .
8 ಮರನಾಮ ಜಮಾದಾರರವರ ಬರೆಸಿಕೊಟ ದರಕಾಸ್ತಿನ ಕ್ರಮ . ದಂದರೆ
9 . . . ಕೊಟೆ . . . . ನೆಲುಮುರಪ್ಪಮ
10 . . . . . ಶ್ರೀ ಶಂಖರ ನಾರಾಯಣ ಸ್ವಾಮಿ . . . . .
11 . . . . ರಕಕ್ಕಲು . ತೆ ಕೊಟ್ಟ ಯಿ ಧರ್ಮ
12 . . . ವಾಗಿ . . .
13 . . . . ಹರಾ . . . . .

## 41

14 . . . . . . ರ . . . .
15 . . . . . ರಾದಾನಾ . . .
16 . . . . . ಕಾಲದಲೂ ಮಾ . ನ ಮಗ . . .
17 . . . ದೂ ಯಂದೊ . . ಕೊಟ್ಟ ಧರ್ಮ ಶಾಸನಾ
18 . . ಗಿ ಹದಲಿ . . ಚೆಯ
19 . . ವಿಪ್ರದತ್ತಾ ವಸುಂದರಾ

## 83

ಅದೇ ಹೋಬಳಿ ದೊಡ್ಡ ಕಡತೂರು ಗ್ರಾಮಕ್ಕೆ ಪೂರ್ವ ದೊಡ್ಡ ಕಡತೂರು ದೇವರಪ್ಪನ ಹೊಲದಲ್ಲಿ.

ಗ್ರಂಥ ಮತ್ತು ಅರವಕ್ಷರ

## 87

ನರಸಾಪುರದ ಹೋಬಳಿ ಕೂರನಹಳ್ಳಿ ಗ್ರಾಮದಲ್ಲಿ ಭೀಮೇಶ್ವರ ದೇವಾಲಯದ ಹಿಂದೆ ನೆಟ್ಟಿರುವ ಕಲ್ಲು.

ಪ್ರಮಾಣ 6′×2′

1 ಸ್ವಸ್ತಿ ಶ್ರೀ ಜಯಾಭ್ಯುದಯ ಸಕ ವ
2 ರುಷಂಗಳು ನಾಲ್ಕು ಸಾವಿರ
3 ದ ನಾನೂಱ ನಾಲ್ವತ್ತ ನಾಲ್ಕನೆ
4 ಯಲು ನಡವ ವರ್ತ್ತಮಾನ ವ್ಯ
5 ವಹಾರಿಕ ವ್ಯಯ ಸಂವತ್ಸ
6 ರದ ಕಾರ್ತಿಕ ಸು ೧ ಆರ
7 ಬ್ಯವಾಗಿ ಶ್ರೀಮನ್ಮಹಾರಾ
8 ಜಾಧಿರಾಜ ರಾಜಪರ
9 ಮೇಸ್ವರ ವೀರಪ್ರತಾಪ
10 ಬ್ಕು ರಾಯರ ಕುಮಾರ ಪ್ರತಾ
11 ಪ ಹರಿಹರ ರಾಯರ ನಿರೂ
12 ಪದಿಂ ಪ್ರದಾನ ಮಲರಸ ಒ
13 ಡಯುರು ಹುಲ್ಲಿಯೂರ ನಾಡ
14 ಹಟ್ಟಿಯೂರ ವೀರಪ್ಪಂಗೆ
15 ಕೊಟ್ಟ ಷಾಸನದ ಕ್ರಮವೆ
16 ಂತೆಂದರೆ ನಿಂಮ್ಮ ಹುಲ್ಲೂರ
17 ನಾಡಲೂ ನಿಂನ್ನ ಬಾಗೆಯ
18 ಲು ತೋಱವ ಸಮುದ್ರದ
19 ಗ್ರಾಮವನೂ ನಿಂನ ದಂಡಿ
20 ಗೆ ಕೊಡಗಿಯಾಗಿ ಸರ್ವ್ವ

(ಹಿಂಭಾಗ)

21 ಮಾಂನ್ಯವಾಗಿ ಆಚಂದ್ರಾರ್ಕ್ಕಸ್ಥಾ
22 ಯಿಯಾಗಿ ಸಲುವಂತಾಗಿ ಕೊಟ್ಟೆವು
23 ಆ ವ::ರಿಯಾದಿಯಲು ಸ:ಕದಿ:: ಬೋ
24 ಗಿಸೂದು ಯಿದಕೆ ಆರೊಬ್ಬರು ಅಳು
25 ಪಿದರೆ ಹಲಿ ಗಂಗೆಯ ತಡಿಯ
26 ಲು ಕಪಿಲೆಯ ಕೊಂದ ಪಾಪದ
27 ಲಿ ಹೋಹರು ಶ್ರೀ ಶ್ರೀ ಶ್ರೀ

## 90

ಕಸಬಾ ಹೋಬಳಿ ಚನ್ನಕಲ್ಲು ಗ್ರಾಮಕ್ಕೆ ಪಶ್ಚಿಮ ಬಂಡೆಯ ಮೇಲೆ.

1 ಶಾರ್ವರಿ ಸಂವತ್ಸ
2 ರದ ಶ್ರಾವಣ ಶುದ ೧

3 ಶ್ರೀಮತು ರಾಜ ಶ್ರೀ ತಿಂಮ
4 ರಾಜ ಹಯಿ ರಾಹುಲವ
5 . . ಯ ಕಾವಲ ವೀರನ ಮಗ
6 . . ಗೆ ಕೊಟ್ಟ ಕ್ರಮವೆಂತೆ
7 . ರ ತನ ಬೆಲುಗನ ಮಗ ತಿರುಮ
8 ಲಗನ . . ಲಿ
9 . . . . . ಯ್ಯ
10 . . . ಳು . . ಳ ಸರಿಯೆಂ
11 . . ಸಲುಳವರು

## 91

ಅದೇ ಗ್ರಾಮದಲ್ಲಿ ವರದರಾಜಸ್ವಾಮಿ ದೇವಸ್ಥಾನದ ಮುಂದೆ ಗರುಡಗಂಭದ ಜಗಲಿಗೆ ಹಾಸಿರುವ ಕಲ್ಲಿನಲ್ಲಿ.

ಪ್ರಮಾಣ $4' \times 1' = 4''$

1 ಆನಂದ ಸಂವತ್ಸರದ ಚೈ
2 ತ್ರ ಶು ೩ ಲು ಚೆಂನ ಕಲಿ
3 ಯ ವೆಂಕಟ ಗಡ್ರು
4 ಮಟಕ್ಕೆ ಬಿಟ್ಟ ಸ್ವಾ
5 ಸ್ತಿ ಯಿದಕ್ಕೆ ತಪ್ಪಿ
6 ರೆ ದೇವಲೋಕ ಮ
7 ರ್ತ್ಯ ಲೋಕಕ್ಕೆ ಹೊ
8 ಆಗು ಯೀ ಪ್ರಕಾ
9 ರದಲ್ಲಿ ಸೂರ್ಯ
10 ಚಂದ್ರಾದಿಗಳು
11 ಳ್ಳಿ ಪರಿಯಂತ್ರವು
12 ನಡಸಲೂಳ್ಳವರು

ಕೋಲಾರ ನಂ. **94** (ಈಗ ಮಾಲೂರು ತಾಲ್ಲೂಕಿಗೆ ಸೇರಿದೆ)

ನರಸಾಪುರದ ಹೋಬಳಿ ಬೆಳ್ಳೂರು ಗ್ರಾಮದ ಕಣ್ವೇಶ್ವರ ದೇವಸ್ಥಾನದ ದಕ್ಷಿಣದ ಗೋಡೆಯಲ್ಲಿ.

1 ಶಕ ವರುಷ ೧೩೭೮ ಮೇಲೆ ವ್ಯಯ ಸಂವತ್ಸರ ಮಾಗಶಿರ ಸು ೧೫ ಗುರುವಾರಯಾಂದ ಸೋಮಗ್ರಹಣ ಪುಣ್ಯಕಾಲ
2 ದಲಿ ಶ್ರೀಮನ್ಮಹಾ ಪ್ರಧಾನ ಬೊಮಂಣ ದಂಣಾಯಕರ ಕುಮಾರ ದೇವರಾಯರ ಧರ್ಮನಿರೂಪದಿಂ ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲ ವಾ
3 ದ ಬೆಳ್ಳೂರ ಸೋಮಯ ದೇವರಿ
4 ಗೆ ಅಂಗರಂಗ ಭೋಗ ಅಮ್ರುತ
5 ಪಡಿಗೆ ಕಂನರ ದೇವರಾಯರು
6 ಕೊಟ್ಟ ಬೆಳ್ಳೂರ ಸ್ಥಳದ ಬಯಿಚನ
7 ಕುಂಟೆ ಎಂಬ ಹಳ್ಳಿ ಆ ದೇವರಾ
8 ಯರು ಬಿಟ್ಟ ತುಡಿಲ ಹಳ್ಳಿಯನು ಯೀ
9 ಎರಡೂರಿಗೆ ಸಲುವ ಚತುಸೀಮೆಯ
10 ನು ಗದ್ದೆ ಬೆದಲು ತೋಟ ತುಡಿಕೆ ನಿಧಿ ನಿಕ್ಷೇ
11 ಪ ಜಲಪಾಷಾಣ ಅಕ್ಷೀಣಿ ಆಗಾಮಿ ಮುಂ
12 ತಾಗಿ ಅಷ್ಟಭೋಗ ತೇಜ ಸಾಂಮ್ಯವನು ಧಾರಾ
13 ಪೂರ್ವಕವಾಗಿ ಆ ಚಂದ್ರಾರ್ಕ ಸ್ಥಾಯಿಯಾಗಿ
14 ಬಿಟ್ಟರು ಆ ನಿರೂಪದಿಂದುಳಿ ನಿಡವ ರಾಣಿಯರ
15 ಮಗ ಮಲದೇವಿ ರಾಣಿಯರು ಆ ಸೀಮೆಯ ದೇವರ ಸ್ಥಾ
16 ನಿಕದಲು ಸ್ಥಾನಿಕರ ಮನೆ ಮೊದಲಾದ ಮದವಳಿಕೆ ಸಲು
17 . . ರಾಯ ಕಾಣಿಕೆ ಸುಂಕ ತೆಱವಾಳಿಕೆ ಸಹ ಸರ್ವಮಾಂ.
18 ವಾಗಿ ಬಿಟೆಲು ಆ ದೇವರ ನಂಬಿಗಳು ತೆಱುವ ವಿಭೂತಿ ಕಾ

19 . . . ಯರುಹ . . . . . . .
20 . . . . ಕ . . . . . . .
21 . . . . ರು . . . . .
22 . . ದ . . . . . .
23 ಂ ದೇವರಾಯ ಪೊಡೆಯರ
24 ದಂಮ ಶಾಸನ ನಿರೂ
25 ಪದಿಂ ಬೆಳಿಮಾರನ ಹ
26 ಳಿಯ ಡಾವುಲ ಸೂರೆ ನಾ
27 ಯ್ಕನು ತಂನ ಬೆಳಿಮಾರನ
28 ಹಳಿಯಲು ಬಿದಿರ ಕುಂ
29 ಟೆಯನೂ ಅದಕೆ ಸಲುವ ಹೊಲ
30 ನನೂ ಶ್ರೀಗಿರಿನಾಥಗೆ ಸಲುವ ಬಇ
31 ರಗೊಂಡನ ಹಳಿಯಲು ಮಾರ
32 ಗುಳಿ ಕುಂಟೆಯನು ಅದರ ಸಲುವ
33 ಹೊಲನನೂ ಯೆರಡೂರ ಸೀಮೆಯ
34 ನೂ ಕೂಡಿ ದೇವರಾಯ ಪುರವನೂ ಬಿ
35 ಟೆಉ ಸೋಮಯ ದೇವರ ಅಂಗರಂಗ ಭೋ
36 ಗ ಅಮ್ರುತ ಪಡಿಗೆ ಚಂದ್ರಾರ್ಕಸ್ಥಾಇಯಾ
37 . . ಡಿ . . . ದ

ಕೋಲಾರ ನಂ. **97** (ಈಗ ಮಾಲೂರು ತಾಲ್ಲೂಕಿಗೆ ಸೇರಿದೆ)

ಅದೇ ಗ್ರಾಮದ ಊರಬಾಗಿಲಿನ ಬಳಿ.

1 ಪ್ರಿಥಿವೀ ವಲ್ಲಭ ಮ
2 ರಮ ಭಟಾರರುತ್ತರೋತ್ತರ
3 ಸಲುತ್ತಿರೆ ಶಕ ವರ್ಷ ಎ
4 . ಆಶ್ವಯುಜ ಬಹು
5 . ದಣ್ಡನಾಯಕ ಶ್ರೀಮ
6 . ದೊಳ್ಪ್ರತಿಪಾಳಿಸು
7 . . ರ . . ಂ ಅ
8 ಐ . . . . . .
9 ಕಪ . . ಪಕ್ಕಿಗವು
10 . . . . ಟಯಿಗೆದ
11 ನಾಯಕನವರು ಆಸನ್ದಿ
12 . ಕೊಟೂರ ಪೊಣ್ಕೆ
13 ನೆಯು ಪೆರ್ಮ್ಮಾಡಿಯಾ
14 . . ಣರಪೊ . . .
15 . ಭಟ ಗುತ್ತ ಸಾ
16 . . . . . . . .

ಕೋಲಾರ ನಂ. **105** (ಈಗ ಮಾಲೂರು ತಾಲ್ಲೂಕಿಗೆ ಸೇರಿದೆ)

ಅದೇ ಹೋಬಳಿ ಗರುಡನಪಾಳ್ಯದ ಕೆರೆಗೆ ಉತ್ತರ ದಿಕ್ಕಿನಲ್ಲಿರುವುದು.

1 ಸ್ವಸ್ತಿ ಶ್ರೀ ಶಕಾಬ್ದ ೧೩೧೨ ಮೇಲೆ ಕಲಿಯುಗ ಸಂದ ೪೪೯೧
2 ಮ್ಯಾಲೆ ಸಲುವ ಪ್ರಮೋದೂತ ಸಂವತ್ಸರದ ಆ
3 ಸ್ವೀಜ ಬ ೩೦ ಐಲು ಪರಾಗ ಸೂರ್ಯಗ್ರಹ
4 ಣ ಕಾಲದಲ್ಲಿ ಬಿಟ್ಟ ಧಂಮ್ರ್ಮ ಸ್ವಸ್ತಿ ಶ್ರೀಮ
5 ಹಾ ಮಂಡಲೇಸ್ವರ ರಾಜಾಧಿರಾಜ ರಾಜಪರಮೇ
6 ಶ್ವರ ಅರಿರಾಯ ವಿಬಾಡ ಭಾಷೆಗೆ ತಪ್ಪುವ ರಾಯರ ಗಂ
7 ಡ ಶ್ರೀವೀರ ಬುಕ್ಕರಾಯನ ಕೊಮಾರ ಚತುಸಮು
8 ದ್ರಾಧಿಪತಿ ಹರಿಹರರಾಯನು ಪ್ರಿತವೀ ರಾಜ್ಯ

ಮಾಡುವಲ್ಲಿ ಶ್ರೀಮತು ಖಂತಿಕಾಬಿರಾಯರ ಗ
ಂಡ ನಾಗಂಣ ಪೊಡೆಯರಿಗೆ ಸಲುವ ನಿಗರಿಲಿ ಚೋ
ಳ ಮಂಡಲ ದಕ್ಷಿಣ ದ್ವಾರಾವತಿ ವಟವ್ರಿಕ್ಷಾ ಶ್ರ
ಯ ಸೇವಿತಮಪ್ಪ ಕೋಳಾಲನಾಡ ಮತ್ತಿಗುಂಡಿ
ಯಾದ ಲಕ್ಷ್ಮೀನಾತಪುರವನು ಶ್ರೀಮತು ಹೆಬ್ಬ
ಟುಲಕುಮಯನಾಯಕ್ಕರು ಬಿಟ್ಟ ಧರ್ಮ
ಕೋಳಾಲ ನಾಡ ಪ್ರಭುಗಳು ಮುಕ್ಕಣ ಸೊಂ
ಣ ಗಉಡ ಯರಿಗಿಸೆಟ್ಟಿ ಪಟ್ಟಣಶ್ವಾಮಿ
ಯು ಮತ್ತು ಇದ್ದಂತ ಧರ್ಮ ಪುರುಷ
ರು ಯುಬೆಯವಾಗಿ ಆ ಲಕ್ಷ್ಮೀನಾತ ಪುರ
ಕೆ ಸಲುವ ಚತುಸ್ಸೀಮೆಯೊಳಗಣ ಗದ್ದೆ
ಬೆದ್ದಲು ಯೇತಯೆಜು ಯಲು ಗುಯ್ಯಲು
ಊರ್ಧ್ವಮುಖವಾಗಿದ್ದ ವ್ರಿಕ್ಷ ಅಧೋಮು
ಖವಾಗಿದ್ದಂತ ಬಾವಿ ನಿಧಿ ನಿಕ್ಷೇಪ ಜಲ ಪಾ
ಷಾಣ ಅಕ್ಷೀಣಿ ಆಗಾಮಿ ಅಷ್ಟಭೋಗ
ತೇಜ ಸ್ವಾಮ್ಯಲು ೧೫ ಬ್ರಾಹ್ಮಣರಿಗೆ ೧೫
ಪ್ರಿತ್ತಿಯನು ಧಾರಾಪೂರ್ವ್ವಕವಾಗಿ ಕೊಟ್ಟೆಉ

## NEW INSCRIPTIONS

### ಹೊಸ ಶಾಸನಗಳು

### 102

ಮಾಲೂರು ಹೋಬಳಿ ಮಾಲೂರಿನ ಕೆರೆಯ ತೂಬಿನ ಮೇಲೆ.

ಗ್ರಂಥ ಮತ್ತು ಅರವಕ್ಷರ

### 103

ಅದೇ ಹೋಬಳಿ ಮಡಿವಾಳ ಗ್ರಾಮದಲ್ಲಿ ಗಂಗಾಧರೇಶ್ವರ ದೇವಾಲಯದ ದಕ್ಷಿಣಗೋಡೆಯ ಮೇಲೆ.

ಗ್ರಂಥ ಮತ್ತು ಅರವಕ್ಷರ

### 104

ಅದೇ ಗ್ರಾಮದ ಊರಬಾಗಿಲಲ್ಲಿ ನಿಲ್ಲಿಸಿರುವುದು.

(ಮೇಲ್ಭಾಗ ಹೋಗಿದೆ)

. . . . . . . . . . . . . .
ಶ್ರೀ . . . . . . . . . . . .
ದಯ . . . . . . . . . . .
ಕ್ರಮಪಂತೆಂದರೆ . . . . . . . . . . .
. . . . . ಯಳು . . . . . . . .
. . . . . . ನಾಯಕತನಕೆ ಸಲುವ
. . . . ದ . . . . . . ಸಂವತ್ಸರದ
. . . . . ಅಮ್ರುತಪಡಿ ನೈವೇದ್ಯ
. . . . . ಪನಮಲ್ಲು . . . . . .
. . . ಅಯ್ಯನವರಿಗೆ ಪುಣ್ಯವಾಗಬೇಕೆಂದು
. . . . ದ . . . . . . ಮಾರ್ಕಂಡೇಶ್ವರ ದೇ
. . ರಶ್ರೀ . . . . ಮಡಿವಳವೆಂಬ ಗ್ರಾಮವನೂ
. . . . . . . ಗ್ರಾಮಕ್ಕೆ ಸಲುವ ಚತುಸ್ಸೀ
. ಯೊಳಗಣ . . ಕಾಡಾರಂಬ ನೀರಾರಂಬ ರ
. . . . . ಅಕ್ಷೀಣಿ ಆಗಾಮಿ ಸಿದ್ಧ ಸಾ

16 . . . . . ಯಷ್ಟಭೋಗತೇಜ ಸ್ವಾಮ್ಯವನೂ
17 . . . . . ಶಿರ . . . . . ನುವದಕೆ
18 . . . . . . ಮಲ . . . . . ವಚ
19 . . ದ್ರ . . . ಧಾರೆಯನೆಱದು ಕೊಟ್ಟಧರ್ಮ
20 ಸಾಸನ ಯಿದಕೆ ಆರು ತಪ್ಪಿದರು . ಗಂಗೆಯ ತಡಿ
21 ಯಲಿ ಗೋಬ್ರಾಂಹಣರನು . . . ಲೆಯ
22 . . . . . . ನು ಕೊಂದ ಪಾಪಕೆ ಹೋಹರು . ದತ್ತ
23 . . . . . . ನು ಪಾಲನಂ
24 ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ
25 ಂಭವೇತ್ ॥ ಶ್ರೀ

## 105

### ಅದೇ ಗ್ರಾಮದ ಮಧ್ಯೆ ಗೋಽಕಲ್ಲಿನ ಕೆಳಗಡೆ ಇರುವುದು.

1 ರು . . . . . . . ಸಂವತ್ಸರದ
2 ಚಯಿತ್ರ ಸು ೧ ಲು ಶ್ರೀಮತು ಗಉಳಿಯ . .
3 ಯ . . ನಹುತ್ತರು . ನಂಮು ಮಾತುಗಳ . . ಡ ಕೆಳದ .
4 ರಿನಾಥದೇವರ . . ಘು . . . . ಕೊಟ್ಟ ಧರ್ಮ
5 . ದ ಕ್ರಮವೆಂತೆಂದರೆ ಮಡಿವಳದ ಗಉಂಡು
6 ಯನಕ . ನೆ ಮೂಱಂ । ಕವಣಿಯ ಅವಕ್ಕಳ ಹೊ .
7 . . ಂದೆನೆಯನೂ ಧಾರಾಪೂರ್ವಕದಿಂ ಆಱಂ . .
8 ಸ್ಥಾಯಿಯಾಗಿ ಕೊಟ್ಟೆಉ ಯೀ ಧರ್ಮಕ್ಕೆ ಅರೂತಿಕ್ರಮಿಪ .
9 ರೂ ಗಂಗೆಯ ತಡಿಯಲಿದ್ದ ಕಪಿಲೆಯ ಕೊ .
10 ಪದಲ್ಲಿ ಹೋಹರು

## 106

### ಅದೇ ಗ್ರಾಮದ ಗರುಡಗಂಬದ ಕೆಳಗೆ.

1 ಪ್ರಮಾದೂತ
2 . . . . ಲು

## 107

### ಅದೇ ಹೋಬಳಿ ದೊಡ್ಡಕಡತ್ತೂರು ಗ್ರಾಮಕ್ಕೆ ಪಶ್ಚಿಮ ಗೋಪಾಲಸ್ವಾಮಿ ದೇವಸ್ಥಾನದ ಗರುಡಗಂಬದ ಬುಡದಲ್ಲಿರುವ ಕಲ್ಲಿನ ಮೇಲೆ.

1 ಕೀಲಕ ಸಂವತ್ಸರದ ಪಾಲ್ಗುಣ ಬ ೧
2 ಲು ಶ್ರೀಮತು ಮುಥುರಾಯರ ಗಂಡದೇ
3 ವರಾಯ ನಯ್ಕರು ಕಡತುರ ಮಂಗೋಜನ
4 ಮಗ ಬಯಿರೋಜನು ನಿಲಿಸಿದ ಹುಮುಶಿನ ಕಂ
5 ಭ ದೇವಂಣವರು ಕೊಟ್ಟ ದಾನ ಕಂ ೧೧ ಗದೆ ೧೨

## 108

### ಅದೇ ಗ್ರಾಮದ ಉತ್ತರಕ್ಕೆ ಬೋಡಣ್ಣನ ಹೊಲದ ಬದುವಿನಲ್ಲಿ.

1 ಆಳುತ್ತಿರೆ ಸಿರು ಗತಿ . ಗಯ್ಯ
2 ವರುಬಯ್ಯನ ಮಗ ಕಾಸ
3 ಯ್ಯ ಕಡೂದೂರ ವೂರಟಿಯೆ
4 ಸತ್ತು ಈಗಲ್ಲರಚ್ಚೆ
5 ಮೊರದು ಬಯಗ
6 ಗ . . . ರ . . .
7 ಳಸತ್ತು . ಲ್ಲ

8 ನದೊ .
9 ಗಗಳ .
10 ಬವ
11 ವಷ
12 . ದು .

## 109

ಅದೇ ಹೊಲದ ಬದುವಿನಲ್ಲಿ ೨ನೆಯ ಕಲ್ಲು.

1 ಸ್ವಸ್ತಿ ಶ್ರೀಮತ್ ಬ
2 ಮಾದಹ . ಮಾರಮ್ಮನ
3 . . . . . . . .

## 110

ಅದೇ ಹೋಬಳಿ ದೊಡ್ಡ ಶಿವಾರಗ್ರಾಮಕ್ಕೆ ಪಶ್ಚಿಮ ಜರಗು ದಿಣ್ಣೆಯಲ್ಲಿ ನಿಂತಿರುವ ಕಲ್ಲು.

ಗ್ರಂಥ ಮತ್ತು ಅರವಕ್ಷರ

## 111

ಅದೇ ಜರಗು ದಿಣ್ಣೆಯಲ್ಲಿ ಇರುವ ಇನ್ನೊಂದು ಕಲ್ಲು.

ಪ್ರಮಾಣ 4′×3′

ಶ್ರೀ ಸ್ವಸ್ತಿ ಸಕಕಾಳ ಮೂನ್ನೂರ್ ಕಾಕಮ್ಬ . . . .
. . . . . . . . . . . . .

## 112

ಅದೇ ಸ್ಥಳದಲ್ಲಿ ಮೂರನೆಯ ಕಲ್ಲು.

ಪ್ರಮಾಣ 5′×5′

1 ಸ್ವಸ್ತಿ ಸಕವರಿಷ ೯೭೦ನೆಯ ಕಿ
2 ಲಕ ಸಂವತ್ಸರಂ ಪ್ರವರ್ತ್ತಿಸೆ ತ
3 ದ್ವರಿಷಾಭ್ಯನ್ತರದ ಪಾ
4 ಲ್ಗುಣ ಸು
5 ದ್ಧ ತೆರಸ
6 ದಾದಿತ್ಯ
7 ವಾರದನ್ದು
8 ರಾಜರಾಜ
9 ಮುಮ್ಮಡಿಪ
10 ಚೋೞದೆ
11 ವಂ ದುಷ್ಟ
12 ನಿಗ್ರಹ ವಿಸಿಷ್ಟಪ್ರತಿಪಾಲನಂಗೆಯ್ದು ಅಪತ್ತಿರೆ ಬಿರಜ್ಜೈನಾಟ್ಗಾ
13 ವುಣ್ಡಗೆಜ್ಜೊಯ್ವರ್ಗಳ್ಷ

## 113

ಅದೇ ಗ್ರಾಮದ ಕೆರೆ ತೂಬಿನ ಮೇಲೆ.

1 ಸ್ವಸ್ವಿ ಶ್ರೀ ದಡಿಗವಾಟಿ ಹೆಂಜಿರ ನಾಳುತ್ತಿರ್ಲ್ಲಯಿವ
2 ರ ವುಗ ಚೋೞದೇವ ಮ . ಚೋೞರ ಸಟಿ ಗಂಗದತ್ತ
3 ಮಾಬಳಿ ನಾತ . . . . . . . . . .

## 114

### ಅದೇ ಹೋಬಳಿ ಮೈಲಾಂಡ ಹಳ್ಳಿ ಗ್ರಾಮಕ್ಕೆ ಪಶ್ಚಿಮ ಹೊಲದಲ್ಲ ೧ನೆಯ ಕಲ್ಲು.

ಪ್ರಮಾಣ $5' \times 4' = 6''$

1 ಶುಭಮಸ್ತು ಸ್ವಸ್ತಿ ಶ್ರೀ ವಿಜಯಾಭ್ಯುದಯ
2 ಶಾಲವಾಹನ ಶಕವರುಷಂಗಳು ೧೪೭೮ನೆಯ ಆ
3 ನಂಧ ಸಂವತ್ಸರದ ಮಾಗ ಶು ೭ಲ್ಲು ಶ್ರೀಮನ್ ಮಹಾರಾಜಾಧಿರಾಜ ರಾಜಪರಮೇಶ್ವರ
4 ಶ್ರೀ ವೀರಪ್ರತಾಪ ಶ್ರೀವೀರಸದಾಶಿವದೇವ ಮಹಾರಾಯರು ವಿಜಯ ನಗರದಲ್ಲಿ ರತ್ನ ಸಿಂಹಾಸನಾ
5 ಋಢರಾಗಿ ಪೃಥ್ವೀರಾಜ್ಯಂಗೆಯುತ್ತಂಮಿರಲು . ನಂಮ ಕುಲೋದ್ಧವನಾದ ಆತ್ರೇಯಗೋತ್ರ ಆಪಸ್ತಂ
6 ಭಸೂತ್ರ ಯಜುಶ್ಶಾಖಾ . . . . ಮನ್ಮಹಾ ಮಂಡಲೇಶ್ವರ ನಂದ್ಯಾಲದ ಹಿರಿಯ ಅಉಭಳ
7 ರಾಜ ಅಯ್ಯನವರ ಪುತ್ರರಾದ . . . ಉ . ನವರ ಪುತ್ರ . . . ಅಉಭಳೇಶ್ವರಯ್ಯ
8 . ವ . ಳ ಅರಸು . ನವ . . ಸದಾಶಿವ . ಶ್ರೀ ದೇವ .
9 ಯ ಕತನಕೆ ಸಲುವ ಮುಳುವಾಗಿಲ ಸೀಮೆಯೊಳಗಣ . . . . . ಳಗಣ ಮೈಲಾಂಡಿಹಳಿ ಗ್ರಾ
10 . . . . ಅಮೃತಪಡಿ ನೈವೇದ್ಯ . . . ಪೂರ್ವಕ . ಅದ . . . ಭಳ . . ದ . . .
. . .
11 . . . . . . ದಾನಧಾರಾಪೂರ್ವಕವಾಗಿ ಧಾರೆಯನೆಱದು . . , . .
12 . ಯಶ್ವರದೇವ . . ರಾದ ಆತ್ರೇಯಗೋತ್ರ ಆಪಸ್ತಂಭ ಸೂತ್ರ
13 ದ ಶ್ರೀಮನ್ ಮಹಾಮಂಡಲೇಶ್ವರ ನಂದ್ಯಾಲದ ಹಿರಿಯ ಅಉಭಳರಾಜ ಅಯ್ಯನವರ ಪುತ್ರ . ಅಉ
14 ಭಳೇಶ್ವರಯ್ಯದೇವ ಮಹಾ ಅರಸುಗಳು ಮುಳುವಾಗಿಲ ಸೀಮೆಯೊಳಗಣ ಬಯಿರ ಸಮುದ್ರದಸ್ಥಳದ ಮಯಿಲಾಂಡ
15 . ಳಿ ಗ್ರಾಮವನು ಕಾಡಾರಂಬ ನೀರಾರಂಬ ನಿಧಿನಿಕ್ಷೇಪ ಜಲ
16 . . ಗಾಮಿಸಿದ್ಧಸಾಧ್ಯಂಗಳು . ಮೊದಲಾದ ಅಷ್ಟಭೋಗ ತೇಜಸ್ಸ್ವಾಮ್ಯವನೂ . ಕ . ರ ಮಾರ್ಕಂಡೇಶ್ವರದೇ
17 . . . . . . . . ಗೋತ್ರ ಆಪಸ್ತಂಬ ಸೂತ್ರ ಯಜುಶಾಖಾಧ್ಯಾಯ . . . .
18 . . . . . . . . ಪೆದ ಅಉಭಳರಾಜಯ್ಯನವರ ಪುತ್ರರಾದ ಚಿಕಅಉ
19 ಭಳರಾಜಯ್ಯನವರ . . . . ಅಉಭಳೇಶ್ವರಯ್ಯ ದೇವ ಮಹಾ ಅರಸುಗಳು ಆ ಚಂದ್ರಾ
20 . . . . . . . ದಸೀಮೆ . . ಭೂದಾನ ಧರ್ಮ ಶಾಸನ । ದಾನ ಪಾಲನಯೋ
21 ರ್ಮಧ್ಯೇ ದಾನಾ ಛ್ರೇಯೋನು ಪಾಲಂ ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ॥ ಸ್ವದತ್ತಂ
22 ದ್ವಿಗುಣಂಪುಣ್ಯಂ ಪರದತ್ತಾನುಪಾಲನಂ ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್
23 . . . . ಲೋಕೇ ಸಮೇಶಾಮೇ . . . . .
24 . . . . ದನೂ ಗಂಗೆಯ ತಡಿಯಲ . . . .
25 . . . . ದ ಪಾಪಕೆ ಹೋಹರೂ . . . .

## 115

### ಅದೇ ಸ್ಥಳದಲ್ಲಿ ೨ನೆಯ ಕಲ್ಲು.

ಪ್ರಮಾಣ $7' \times 2'$

1 ಶುಭಮಸ್ತು ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲ
2 ವಾಹನ ಶಕ ವರುಷಂಗಳು ೧೪೫೫ನೆಯ . .
3 . ಸಂವತ್ಸರದ ಬಾದ್ರಪ ಬ ೫ ಲು ಶ್ರೀಮನ್ಮಹಾ
4 ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾ
5 ಪ ಅಚುತದೇವ ಮಹಾರಾಯರ ಪ್ರಿಯ
6 ಕುಮಾರರೂ ಸಣಿ . . ಪ . ನಾಯಕರ
7 ಮಕ್ಕಳು ಚಿಂನಪ್ಪನಾಯಕರ ತಂಮ ತಿಂ
8 . ೦ಮಪ್ಪ ನಾಯಕರು . .
9 . ಹಾರಾಯ . . .
10 . . . . . ಅವ . . .
11 ವರಗಳ . . . ಮ . . ಯ
12 ಕಾಲಕೆ . . . . .
13 ವಮುನಂ . . . . . .
14 . . . . . . . .

15 . . . . . ಮ . . . . .
16 . . . . . . . . . . .

## 116

ಅದೇ ಹಳ್ಳಿಗೆ ಪಶ್ಚಿಮ ಸರ್ವೆ ನಂಬರ್ 84ರಲ್ಲಿರುವ ಬಂಡೆಯ ಮೇಲೆ.

1 ವಿರಾಟ್ಟರಾಜಾ
2 ಕೊಟಕು ಅದ್ದೂ

## 117

ನರಸಾಪುರದ ಹೋಬಳಿ ನರಸಾಪುರದಲ್ಲಿ ಬಾಣೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಹಾಸಿರುವ ಕಲ್ಲಿನಲ್ಲಿ.

ಪ್ರಮಾಣ 6′×3′

1 ಸಕನೃಪಕಾಳಾತೀತ ಸಂವತ್ಸರ ಸತಂಗಳೊಂಬ
2 ಯ್ನೂಱನಾಲ್ವತ್ತೆರಡನೆಯ ರೌದ್ರಸಂವತ್ಸ
3 ರಂ ಪ್ರವರ್ತ್ತಿಸುತ್ತಿರೆ ಪಾಲ್ಗುಣಮಾಸದ ಸುದ್ಧಪಕ್ಷದ
4 ಚತುರ್ದ್ದಸಮಿ ಮಂಗಳವಾರದನ್ದು ಬರಗೂರರಸ ಬಿ
5 ಯಗಾವುಣ್ಡನ ವ:ಗ ದೆಯ್ಯಮ್ಮ ಗಾವುಣ್ಡ ಆದಿತ್ಯದೆವ
6 ರ ಪ್ರಥಿಮೆಯ ಮಾಡಿಸಿ ಪ್ರತಿಷ್ಟೆಗೆಯ್ಸಿ ನಿಲಿಸಿದನು

## 118

ಅದೇ ಸ್ಥಳದಲ್ಲಿ ಕಾಶೀ ವಿಶ್ವೇಶ್ವರ ದೇವಸ್ಥಾನದ ಮುಂಭಾಗದಲ್ಲಿರುವ ವೀರಗಲ್ಲು.

ಪ್ರಮಾಣ 3′×3′

ಸ್ವಸ್ತಿ ಶ್ರೀ ಸಿಗುಣೂರರ್ ಕೆಳೆನಲ್ಲು (ಒಡೆದಿದೆ)

## 119

ಅದೇ ದೇವಸ್ಥಾನದ ಗರುಡಗಂಬದ ಕೆಳಗೆ ೨ನೆಯ ವೀರಗಲ್ಲು.

(ಮೇಲ್ಭಾಗ ಹೋಗಿದೆ)

ತೊಱುಕ್ಕೊಳುಳ್ವಿಪ್ಡಾ೯

## 120

ಅದೇ ಗ್ರಾಮದಲ್ಲಿ ಆನಂದಸರಸ್ಸಿನ ಪಕ್ಕದಲ್ಲಿ ಬಿದ್ದಿರುವ ಕಲ್ಲು.

ಪ್ರಮಾಣ 6′×2′

1 ಶ್ರಿ ಗಣಾಧಿಪತಯೆಂನಮ
2 . ವಿ . . ದವಿ . . . . ದ
3 . . . . ಅಸಾದ್ಯ . . . .
4 . . . . . . . . . .
5 . . . . ಪ . . . . .
6 . . . . ಮೂ . . . ನ .
7 . . . . . . . ಪ . .
8 . . . . . . . . . .
9 . . . . . . . . . .
10 . . . . . ನವರ . . . . .

11 . . . ಯ . ವಕ . . . .
12 . . . . . . ಕೊ . .
13 . . . . . ಕರಜಿ . . ಪರ
14 . . . , ವದ . . . .
15 . . . . . . . ಯಿ ಕಮ
16 ದೆ . ನೆ . ಸಿಗ . . . .
17 . . . . . . .

## 121

ನರಸಾಪುರ ಹೋಬಳಿ ಗೇರುಪುರ ಗ್ರಾಮಕ್ಕೆ ಈಶಾನ್ಯದಲ್ಲಿ ಬಸವನ ಗುಡಿಯ ಪಶ್ಚಿಮದಲ್ಲಿ ನೆಟ್ಟ ಕಲ್ಲು.

ಪ್ರಮಾಣ 4′=6″×3′

1 . . ಮಸ್ತು . . ಜಯಾದ್ಭುದಯ
2 ಶಾಲವಾಹನ ಶಕ ವರುಷ . . . .
3 ದ ೧೫
4 ಶ್ರೀ ವೆಂಕಟಪತಿರಾಯರು ಪ್ರುಥಿವೀರಾಜ್ಯಂ
5 . ಸುಗುಟೂರ . . . ಗಉಡ
6 . . . . . . . . . .
7 . . . . . . . . . .
8 . . . . . . . . .
9 . . ದರನ ಮಗ . . . .
10 . . . . . ಪುರದ ಬಯಿ . .
11 . ನ
12 ಕೊಟ ಸ ಯೀ ಗ್ರಾಮಕೆ ಸಲುವ ಅಕ್ಷೀಣಿ ಆ
13 ಗಾಮಿ ನಿಧಿನಿಕ್ಷೇಪ ಜಲಪಾಷಾಣ ಸಿದ್ಧಸಾಧ್ಯಂಗ . . . .

## 122

ಅದೇ ಹೋಬಳಿ ತಗಾಬೆಗೆ ಆಗ್ನೇಯ ಭಜಂತ್ರಿ ಇನಾಮತಿ ಹೊಲದ ಅಗ್ನಿಮೂಲೆ ಬಂಡೆಯ ಮೇಲೆ.

1 ವಿಕ್ರುತಿ ಸಂವತ್ಸರಧ ಕಾರ್‍ತ್ತಿಕ ಶು ೧೦ ಮಾ
2 ವಿಲಿ ಸೆಟ್ಟಿಯ ಮಗ ವಿರನು ಕಟ್ಟಿಸಿದ ಕುಂಟೆ
3 ಶಿವನ ದರ್‍ಮ್ಮ ತಿರುಮಲೆ ದೇವರ ದರ್‍ಮ್ಮ

## 123

ಅದೇ ಹೋಬಳಿ ಕುರಿಕಿ ಗ್ರಾಮದ ಊರ ಮುಂದೆ ಅಶ್ವತ್ಥ ಮರದ ಕೆಳಗಿರುವ ಬಂಡೆಯ ಮೇಲೆ.

ಗ್ರಂಥ ಮತ್ತು ಅರವಕ್ಷರ

## 124

ಅದೇ ಗ್ರಾಮದ ಊರಬಾಗಿಲಿಗೆ ಉತ್ತರಕ್ಕೆ ಬಂಡೆಯ ಮೇಲೆ ಇರುವ ಒರಳಿನ ಮೇಲೆ.

1 ಮಾರಪಜಿ
2 ಯರ ಮಗ
3 ಪೊಣಜಿಯ
4 . . . ಡಿಸಿದ
5 ಮರಲು

## 125

ಅದೇ ಗ್ರಾಮಕ್ಕೆ ಉತ್ತರ ಪಟೇಲ್ ಮುನಿಗೌಡನ ಹೊಲದಲ್ಲಿ ಬಾವಿಗೆ ಉತ್ತರ ಬಂಡೆಯ ಮೇಲೆ.

1 ಶುಭಮಸ್ತು ಶಕ ವರುಷ
2 ೧೩೫೦ನೆಯ ಶುಕ್ಲ ಸಂವತ್ಸ
3 ರದ ಮಾಘ ಸು ೧೫ ಸೋಮ
4 . . ಯ ವಾರ . . ಕುಱುಕ . ರ
5 ಅಕ್ಕಸಾಲೆ ಚೆಂನಣ ಚಿಕ
6 ಚಿಕಯನಜೀಯ . . . . ಒ
7 . . . . . . . ಮಗ ಚಿಕಪನ
8 . . . ಸಾಸನದ ಕ್ರಮವೆಂತೆಂದರೆ
9 ನಾ . . . . ರಿಗೆ . ದ
10 . . . . ನಕೆಱೆಯನೂ ಅದಕ್ಕೆ ಸಲುವ
11 . . . . ಅದಂಮ . . . ಸೆ
12 ಯವಾಗಿ ಕೊಟ್ಟ ಕ್ರಯ . . . ಲ್ಯವಂ
13 ಗ ೧೦ ಅಕ್ಷರದಲು ವರಹ ಹ .
14 ಹೊಂನನು ೭೦ . ಯಿಯಲು ಯಿಸಿಕೊಂಡು
15 ಕ್ರಯವಾಗಿ ಕೊಟ್ಟೆಉ ನೀನು ಯೀಕೆಱೆಯನು ದಂ
16 . . . . ಆ ಚಂದ್ರಾರ್ಕಸ್ಥಾಯಿಯಾಗಿ ನೀನು ಅನುಭವಿ .
17 ಕೊಂಬುದು ಯೆಂದು ಕೊಟ್ಟದಂಮ . . ಯಿಂತಪ್ಪುದ
18 ಕೆಳು ಹೆಂಬ ಸೆಟ್ಟಿಯ ಮಗ ರಂಗಸೆಟ್ಟಿ
19 ದೇವನ ಮಗ ಬೊಪ್ಪ ಜೀಯ . . . ಜೀಯನ ಮಗ ನಲ್ಲಿ . .
20 ಪ್ಪನು . ಗಿರಪ್ಪನ ಮಗ ಚೊಕ್ಕಯ . . ದೇವಯನ ತದಿ
21 ಅಂನ ದಾತಗಳ ಬರಹ ದೇಸದ ಪೊಪ್ಪ ಶ್ರೀ ಬಯಿರಾ . ಚ
22 ಸಾಕ್ಷಿಗಳ ಪೊಪ್ಪ ಶ್ರೀ ಬಇರವನು ಮಹಾದೇವ
23 ಬಯಿರವನು

## 126

ಅದೇ ಗ್ರಾಮಕ್ಕೆ ಉತ್ತರ ಲಾಯದ ಮುನಿಯಪ್ಪನ ಹೊಲದ ಬಂಡೆಯ ಮೇಲೆ.

ಗ್ರಂಥ ಮತ್ತು ಅರವಕ್ಷರ

## 128

ಅದೇ ಹೋಬಳಿ ದೊಡ್ಡ ಹೊಲ್ಲಬ್ಬೆ ಗ್ರಾಮದ ಊರ ಬಾಗಿಲಿನ ಬಲಗಡೆ ಗೋಡೆಗೆ ಸೇರಿಸಿರುವ ಶಾಸನ ಕಲ್ಲು.

ಪ್ರಮಾಣ 5′ × 3′

1 ಶ್ರೀ ಗಣಾಧಿಪತಯೆ . . ಮ॥ ದೇವಿ
2 ಸತ್ಯದೆವಿ। ಗುರೊರ್‍ದೆವಿ। ಮ . . । ಅಸಾದ ಮಂತ್ರ
3 ದೆ . ದೇವಿ। . . . ಹೇಮಕೊಪವಿ। ಸ . . । ಸಿದ ಜೊಗಿ
4 ಮಂತ್ರ ಅದು . . ವಿಷದೋಮ . . . . ದ ।
5 . . ನದ ಮಂತ್ರ। ಬಾಯಸಕ . . . ದೊಷವಂ ಪತವಂ
6 ಲ . ಯೂ ಯಂತ್ರದಿಂದ . . . . ಚತುಷ್ಕಮವಾಗದೆ
7 . . ಹರಿವಹಾ . . . ತಕಟ್ಟುವೆ। ಅಕಾಶವ
8 ಲುಪೆಮು . . . . ವೆನದಿ ಕೊಟ ಸಗರಕ
9 ಟುವೆ . ಕ್ರಿಂ . . ಕಟ್ಟು। ಕೊಂಡವ . ರ ಕಟ್ಟು
10 . . . . ರ ಕಟ್ಟುವೆ। ಭೈರವನು ಕಟ್ಟುವೆ। ದುರ್ಗಿಯ
11 ಕಟ್ಟುವೆ ಬರನಮ . . ಕಟ್ಟು . . ಯ ಕಟ್ಟು
12 ಮೆ . . ರ . ಗೆ . . ಕಟ್ಟು . . . . ಕಮ

## 129

ಅದೇ ಗ್ರಾಮದಲ್ಲಿ ಚನ್ನಕೇಶವಸ್ವಾಮಿ ದೇವಸ್ಥಾನದ ಉತ್ತರ ಗರುಡಗಂಬದ ಕೆಳಗೆ ಹಾಸಿರುವ ಕಲ್ಲು.

ಪ್ರಮಾಣ $4' \times 2' = 3''$

1 ಸವುಮ್ಯ ಸಂವಚ್ಚರದ ವಯಿಶಕದ
2 ಲು ರೊಹಿಣಿ ನಕ್ಷಾತ್ರದಲು ತಿರುಮಲೆ
3 ಗಿರಿಯು ಸ್ತಾನದಲ್ಲಿ ವರದ ಹುಣಿಸೆಯ ಪ
4 ಂಥ ತಿಂಮಯನ ಮಗ ತಿಂಮಯನು ನಿ
5 ಲಸಿದ ಕಂಬ ಯಲ್ಲದಾಯ| ನಿಲಿಸಿದ ಕಂಬದ ಪ
6 ಲದಾಯಲರಯ್ಯ ಬರುಹ ತಿಂಮಯನು

## 130

ಅದೇ ಗ್ರಾಮಕ್ಕೆ ಪಶ್ಚಿಮ ಬಂಡೆಯ ಮೇಲೆ.

1 ಯಸುಸಾನುಸಯಿ೦
2 ಪಾಲು

## 131

ಅದೇ ಗ್ರಾಮದಲ್ಲ ಚೆನ್ನಕೇಶವ ದೇವಸ್ಥಾನದ ಗರುಡಗಂಬದ ಪಕ್ಕದಲ್ಲಿ ಹಾಸಿರುವ ಕಲ್ಲು.

ಪ್ರಮಾಣ $4' \times 3'$

1 ಶ್ರೀಮತು ಪ್ಲವ ಸಂವತ್ಸರದ ಪಾಲ್ಗುಣ ಸು ೭ ಜಿ
2 ಮೆಲುಹೊಲ್ಲದೆಯ ಹಾಬನಾಯಕನ ಮಗ ಸಿರಪ
3 ನು ಶ್ರೀ ತಿರುಮಲ ದೇವರಿಗೆ ಸಮರ್ಪಿಸಿದನು
4 ಕಂಬವ ಮಾಡಿದವನು ನಿಂಗಕೋಜನು ಮಂಗಳ ಮಹ ಶ್ರೀ ಶ್ರೀ

## 132

ಅದೇ ದೇವಸ್ಥಾನದ ಬಾಗಿಲ ಎಡಗಡೆ ನಿಲುವುಗಲ್ಲನಲ್ಲಿ.

1 ವಿಭವ ಸಂವ
2 ತ್ಸರದ ಮಾರ್ಗ
3 ಶಿರ ಬ ೫ ಲು
4 ಹೊಲಬೆ ಚೆಂ
5 ನಿಗರಾಯನು

## 133

ಅದೇ ಹೋಬಳಿ ಬೆಳ್ಳೂರಿನ ಊರು ಬಾಗಿಲನಲ್ಲಿರುವ ಒಂದನೆಯ ಕಲ್ಲು—ಯಂತ್ರದ ಕಲ್ಲು.

ಪ್ರಮಾಣ $4' \times 2' = 6''$

1 ಶ್ರಿ ಗಣಾಧಿಪತಯೆ ನಮಃ . . . . ಕ
2 . . . ಮಂತ್ಯ . . . ತ್ರ
3 . ವನೆ . . . ದ ದೇವ .
4 . . . . . ಪರ
5 . . . ತಂತ್ರ . . . ಬಿಕ್ಷಾಗುಣ
6 . . . ಮಹಾ . . . .

7 . . ಅಕಾ . . . ಯಾ . . . .
8 . . . ನ . . . ನದರಕೆ . .
9 . . . . ದರ . . . . . .
10 ರ . ಲು . . . ಭೈರವೇನ ಕಾ . . .
11 . . . ನಮ . . . . . .
12 . . . . ವ . ವೊಂ ನಮ ಶಿವಾಯ . . .

## 134

ಅದೇ ಸ್ಥಳದಲ್ಲಿ ಎನೆಯ ಕಲ್ಲು—ತುಂಡು ಕಲ್ಲು.

ಪ್ರಮಾಣ 3′×1′

1 . . . . . . . .
2 . ಶಮ್ಮೊ . . . . . ಬಿ
3 ಮ ಬಿಟ್ಟಸೆ . . . . ವ .
4 . ಬ್ಬೊ . . . .
5 . . . . . . . .
6 . . . ವ . ಯ . . ರಕ
7 . . . ಕರೊಮಜಂ

## 135

ಅದೇ ಗ್ರಾಮದಲ್ಲಿ ಊರ ಹೊಸದಾಗಿಲ ಬಲಗಡೆ ನೆಟ್ಟ ಕಲ್ಲು.

ಪ್ರಮಾಣ 3′×6″

1 . . .
2 ತ್ತಿರೆ ಬಲ
3 ಯ್ಚಮಯ್ಯ
4 ಥಗುಟ್ಟಿಸಿ
5 ಅಮ್ಮಣ
6 ಮಣಗು
7 ಯೊಣ್ಣಬನ್ದ . . .
8 ಕಾರ್ತ್ತಿಗೆ ಯುಂ
9 ಲಯವಕ
10 ವಪಿಕ್ಕೆಲ
11 ಸಿರ್ಬ್ಬರುಂ
12 ಬಿಳಿಯ
13 ಹ ಜನಕ್ಕೆ
14 ಯನ್ಟಿದೊ
15 ಪಾತಕವ
16 ಮದುವೆ

## 136

ಅದೇ ಗ್ರಾಮದಲ್ಲಿ ಮುನಿವೆಂಕಟನಾಯಕನ ಮನೆಯ ಮುಂದೆ ಬಿದ್ದಿರುವ ತುಂಡು ಕಲ್ಲು.

1 ಯ ಗೋವಿನ್ದ ಮಾಧವರಸರ
2 ಯ್ಯು . ರಭಸುರ ಕಣ್ಣ್ಣರಾಯ ಕೊಟ್ಟೆ
3 . . ವಿನ್ನಪ್ಪಂ ಕೆಯ್ಸಿ ಪ್ರಸಾದ

## 137

ಅದೇ ಕಡೆ ಬಿದ್ದಿರುವ ಬೇರೆ ತುಂಡು ಕಲ್ಲು.

1 ಯ್ಯು ಕೊಟ್ಟೆದುವೆವ್ವೆಟ್ಟಿಂದಾ ಮಱು .
2 ಕ್ಕರ್ಳ್ ಉಳ್ದ್ದೂರ ಕವೆ ನನ್ನಾಕಾರಿಚಾತ್ತು
3 . . . . ರ್ ಕು ಮೂರನ್ದೆಯರ್ ಪ . .

## 138

### ಅದೇ ಗ್ರಾಮದಲ್ಲಿ ಆಂಜನೇಯ ದೇವಸ್ಥಾನದ ಬಾಗಿಲ ಬಲಗಡೆ ನೆಟ್ಟಿರುವ ತುಂಡು ಕಲ್ಲು.

ಪ್ರಮಾಣ 2′×1′

1 ನ್ದು ಪೊತ್ತುಮೆಯ್ಕೊಡಿ
2 ವಾರಣಸಿಯುಂ ಕವಿ
3 ಕ್ಕು ಅಱುಳಿದ್ದೊರಣಧಿ
4 ನನ್ನಿ ಇದ ಬೆಸಗೆಯ್ದೊಂ

## 139

### ಅದೇ ಗ್ರಾಮದಲ್ಲಿ ಕಣ್ವೇಶ್ವರ ದೇವಸ್ಥಾನದ ಧ್ವಜಸ್ತಂಭದ ಕೆಳಗೆ ಹಾಸುಗಲ್ಲಿನಲ್ಲಿ.

1 ಸ್ವಸ್ತಿ ಶ್ರೀ ಶಕ ವರುಷ ೧೪೫೪ನೆಯ ಮೇಲೆ ಸಲುವ
2 ನಂದನ ಸಂವತ್ಸರದ ಕಾರ್ತಿಕ ಬ ೫ ಲೂ
3 ಶ್ರೀಮತು ವಿಲಿಸೆಟಿಯ ಮಗ ಹಿರಿಯ ವೀರನು ಬೆಳ್ಳೂರ ಸೋಮಯ ದೇವರ ಗುಡಿಯ ಮುಂದೆ ನಿಲಿಸಿದ ಕಂ .
4 ಯಿ (ಮುಂದೆ ಕಟ್ಟಡದಲ್ಲಿ ಸೇರಿದೆ)

## 140

### ಅದೇ ಧ್ವಜಸ್ತಂಭದ ಕಟ್ಟಡದ ಹಾಸುಗಲ್ಲು.

1 ಕಂಭಾದ ಸೆ
2 ವೆ ಶ್ರೀ

## 141-145

### ಅದೇ ದೇವಸ್ಥಾನದ ತಳಪಾದಿ ಮತ್ತು ಗೋಡೆಗಳ ಮೇಲೆ.

ಗ್ರಂಥ ಮತ್ತು ಅರವಕ್ಷರ

## 146

### ಅದೇ ದೇವಸ್ಥಾನದ ಪೂರ್ವ ದಿಕ್ಕಿನ ಗೋಡೆಯ ಮೇಲೆ.

1 ಶುಭಮಸ್ತು ಸ್ವಸ್ತಿ ಶ್ರೀ ಶಕ ವರುಷ ೧೪೨೦ನೆಯ ಮೇಲೆ ಕಾಲಯುಕ್ತಿ ಸಂವತ್ಸರ
2 ದ ಶ್ರಾವಣ . ೧೫ ಉ ಆದಿ . . . ಸೋಮೋಪರಾಗ ಪುಂಣ್ಯಕಾಲ . . . .
3 ಮಹಾರಾಜಾಧಿರಾಜ ರಾಜಪರಮೇಶ್ವರ ಧರಣಿವರಾಹ ಕಠಾಱಿ ಸಾಳುವ ಸಾಳುವ ಯಿಂಮ
4 ಡಿ ನರಸಿಂಗೆ ಮಹಾರಾಯರು ಪ್ರಿಥ್ವೀರಾಜ್ಯಂಗೆಯಿ ಉತ್ತಂ ವಿರಲು
5 ನರಸಣ ನಾಯಕರಿಗೆ ಧರ್ಮವಾಗಬಹ ಎಂದು ಅನಾದಿ ಆಗ್ರ
6 ಹಾರಂ ಶ್ರೀವಿಷ್ಣುವರ್ಧನ ಚತುರ್ವೇದಿ ಮಂಗಲವಾದ ಬೆಳೂರ ಸೋಮ
7 ಯ ದೇವರಿಗೆ ಅಂಗರಂಗ ವಯಿಭೋಗ ಅಮ್ರುತಪಡಿ ನಂದಾ
8 ದೀಪತ್ತಿ ರಾಮಿಯಪ್ಪ ರಾಹುತರು ಬೆಳೂರ ಸ್ಥಳದ ತರಟೆಯೆಂಬ ಕುಪ್ಪಕ್ಕೆ ಪ್ರತಿನಾಮಧೇಯರಾ
9 ಮೂಪುರವೆಂಬ ಕುಪ್ಪಕ್ಕೆ ಸಲುವ ಚತುಸೀಮೆಯ ಮರಾಗಲವಿ ಹಳಿಯ ಹಿರಿಯ ಕೆ
10 ಱೆಪೊಳಗುಂ ಗುಂಡಿಗೆ ಪಡವಲು ತೆಂಕಣದ ಕಲ್ಲಯ ಬಂಡರೆ ಬಡಗಲು ಪಡುವಲು ಕರಿಯ
11 ತರಡಿಗೆ ಮೂಡಲು ಬಡಗಲು ಬಿಇಚನ ಮರಡಿ . . ಬಂಡೆಗೆ ತೆಂಕಲು ಯೀ ಚತುಸೀಮೆಪೊಳ
12 ಗಾದ ಕೆಱೆಕುಂಟೆ ಗದ್ದೆ ಬೆದ್ದಲು ತೋಟ ತುಡಿಕೆ ನಿಧಿ ನಿಕ್ಷೇಪ ಜಲ ಪಾಷಾಣ ಸಿದ್ಧ ಸಾ
13 ಧ್ಯವೆಂಬ ಅಷ್ಟಭೋಗತೇಜಸ್ವಾಮ್ಯವನು ಸಹಿರಣ್ಯೋದಕ ದಾನಧಾರಾಪೂರ್ವಕವಾಗಿ ಆಚಂದ್ರಾರ್ಕಸ್ಥಾಯಿಯಾಗಿ
14 ನರಸಣನಾಯಕರಿಗೆ ಧಂರ್ಮವಾಗಬಹಯೆಂದು ಬೆಳೂರ ಸೋಮಯದೇವರ ಅಂಗರಂಗ ಭೋಗ ಅಮ್ರುತಪ
15 ಡಿಗೆಯೂ ನಂದಾದೀ [ಪ] ಸಹ ತ್ರಿವಾಚಕ ಬಿಟ್ಟ ಧರ್ಮಶಾಸನ ದಾನಪಾಲನಯೋರ್ಮಧ್ಯೇ ದಾನಾಛ್ರೇಯೋನು
ಪಾಲನಂ ದಾ
16 ನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ॥ ಸ್ವದತ್ತಾಂ ಪರದತ್ತಾಂ ವಾ ಯೋಹರೇತಿ ವಸುಂಧರಾಂ
ಷಷ್ಟಿರ್ವರ್ಷ
17 ಸಹಶ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ॥

